# ಶ್ರೀ ಬಸವಚರಿತ್ರೆ.





ಎಂ. ಎಂ. ಹರ್ಡೇಕರ್.

# ಶ್ರೀ ಬಸವ ಚರಿತ್ರೆ




ಲೇಖಕ

**ಮಂಜಪ್ಪ ಹರ್ಡೇಕರ್.**



ಪ್ರಕಾಶಕ

**ಬಾಳಪ್ಪ ಬೊಂದಾಡೆ.**

**ದಾವಣಗೆರೆ.**







**ಮೊದಲನೆಯ ಆವೃತ್ತಿ ೩,೦೦೦ ಪ್ರತಿಗಳು.**





ಶಾ. ಶ. ೧೮೫೬]  ಕ್ರಯ ೧ ರೂ.  [ಕ್ರಿ. ಶ. ೧೯೩೪

ಶ್ರೀ

# ಮುನ್ನುಡಿ.

---

ನನ್ನ ಪರಮ ಮಿತ್ರರಾದ ಶ್ರೀಯುತ ಮಂಜಪ್ಪ ಹರ್ಡೇಕರ ಇವರು ತಾವು ಬರೆದಿರುವ ಈ " ಬಸವ ಚರಿತ್ರೆ " ಗೆ ಮುನ್ನುಡಿಯನ್ನು ಬರೆಯುವದಕ್ಕೆ ನನಗೆ ಹೇಳಿದುದು ಅನೇಕರಿಗೆ ಅಚ್ಚರಿಯನ್ನುಂಟುಮಾಡಬಹುದು. ಏಕೆಂದರೆ, ನಾನು ವೀರವೈಷ್ಣವನು, ಅವರು ವೀರಶೈವರು ; ಚರಿತ್ರನಾಯಕರು ಅವರ ಧರ್ಮದ ಮಹಾಪುರುಷರು. ಆದರೆ, ಇದರ ಗೂಢವು ಇಷ್ಟೇ:- ಅವರೂ ಕನ್ನಡಿಗರು, ನಾನೂ ಕನ್ನಡಿಗನು, ಬಸವಣ್ಣನವರೂ ಕನ್ನಡಿಗರು.

ಪರಮತ ಸಹಿಷ್ಣುತೆಯೇ ಹಿಂದುಧರ್ಮದ ಮೂಲ ಲಕ್ಷಣ. ನಿರ್ಜೀವವಾದ ಉದಾಸೀನತೆಯು ನಿಜವಾದ ಸಹಿಷ್ಣುತೆಯಲ್ಲ, ಸಜೀವವೂ ಸಾತ್ವಿಕವೂ ಆದ ಅಭಿಮಾನವೇ ನಿಜವಾದ ಸಹಿಷ್ಣುತೆ. ಈ ಸದ್ಗುಣವು ಪ್ರಾಚೀನಕಾಲದಲ್ಲಿ ಎಲ್ಲಿಯಾದರೂ ಪ್ರಬಲವಾಗಿ ಪ್ರಕಟವಾಗಿದ್ದರೆ ಅದು ಕರ್ಣಾಟಕದಲ್ಲಿ; ಇಲ್ಲಿ ಇದ್ದಷ್ಟು ಪರಸ್ಪರ ಪರೋಧಸ್ವರೂಪವುಳ್ಳ ಮತಗಳು ಮತ್ತಾವಲ್ಲಿಯೂ ಕಂಡುಬರುವದಿಲ್ಲ; ಇಲ್ಲಿ ಇದ್ದಷ್ಟು ಮತಾಭಿಮಾನವು ಬೇರೆ ಕಡೆಗೆ ಕಾಣುವದಿಲ್ಲ; ಇಲ್ಲಿ ಇದ್ದಷ್ಟು ಸಹನಶೀಲತೆಯೂ ಅನ್ಯತ್ರ ದೃಗ್ಗೋಚರವಾಗುವದಿಲ್ಲ. ಈ ಕರ್ನಾಟಕದಲ್ಲಿ, ಜೈನ, ಶೈವ, ವೈಷ್ಣವ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮುಂತಾದ ಅನೇಕ ಪಂಥಗಳು ಏಕಕಾಲದಲ್ಲಿ ತೇಜೋಮಯವಾಗಿ ಪ್ರಕಾಶಿಸುತ್ತ, ಸುಖಸಮಾಧಾನದಿಂದ ನಲೆಯುತ್ತಿದ್ದವು. ಸಾರಾಂಶ, ಧರ್ಮದ ಬಗ್ಗೆ ಉತ್ಕಟವಾದ ಅಭಿಮಾನವನ್ನು ತಾಳುವದೂ, ಹಾಗೆ ಉತ್ಕಟವಾದ ಅಭಿಮಾನವನ್ನು ತಾಳಿದ್ದರೂ ಪರಮತಗಳ ವಿಷಯವಾಗಿ ಸಹಿಷ್ಣುತಾಬುದ್ಧಿಯನ್ನು

ವಹಿಸುವದೂ ಕರ್ಣಾಟಕದ ವೈಶಿಷ್ಟ್ಯಗಳೆಂದೇ ಹೇಳಬಹುದು. ಕರ್ಣಾಟಕದ ಹಳ್ಳಿಗಳನ್ನು ನೋಡಿದರೆ, ಈ ಮಾತು ನಿದರ್ಶನಕ್ಕೆ ಬರುವದು. ಒಂದು ಹಳ್ಳಿಯಲ್ಲಿ ಬಹುಜನ ಸಮಾಜವು ಲಿಂಗಾಯತರದು, ಹಲಕೆಲವು ಪಾಂಚಾಳ, ರಡ್ಡಿ, ಅಂತ್ಯಜ ಮುಂತಾದವರ ಮನೆಗಳು, ಒಂದೆರಡು ಮಾತ್ರವೇ ಬ್ರಾಹ್ಮಣರ ಮನೆಗಳು. ಪರಸ್ಪರರಲ್ಲಿ ಪ್ರೇಮಭಾವವು ನೆಲೆಗೊಂಡಿರದಿದ್ದರೆ, ಇದು ಎಂದಿಗಾದರೂ ಶಕ್ಯವಾಗುತ್ತಿತ್ತೇ ? ಮತಕಲಹಗಳ ಬೀಜವು ಇತ್ತೀಚಿನದು. ಭಿನ್ನ ಭಿನ್ನಮತಗಳ ನಡುವೆ ಏನೂ ಕಲಹಗಳೇ ಇದ್ದಿಲ್ಲವೆಂದು ನಮ್ಮ ತಾತ್ಪರ್ಯವಲ್ಲ. ಹಾಗಾಗುವದು ಯಾವ ದೇಶದಲ್ಲಿಯೂ ಯಾವ ಕಾಲಕ್ಕೂ ಸಾಧ್ಯವೇ ಇಲ್ಲ. ಆದರೆ ನಮ್ಮ ಲಕ್ಷವು ಅವರೊಳಗಿನ ಪ್ರೇಮಕ್ಕಿಂತ ಕಲಹಗಳ ಕಡೆಗೆ ಈಗ ಹೆಚ್ಚು ಹೋಗುತ್ತಿರುವದೆಂಬುದೇ ನಮ್ಮ ಅಭಿಪ್ರಾಯ. ಇರಲಿ.

ಕರ್ನಾಟಕಸ್ಥರಲ್ಲಿ ವಾಸಿಸುವ ಈ ಪರಮತ ಸಹಿಷ್ಣುತೆಗೆ, ಮೊದಲು ಬೀಜರೂಪದಿಂದಿದ್ದರೂ ಇತ್ತೀಚಿಗೆ ವೃದ್ಧಿಂಗತವಾಗುತ್ತಿರುವ ದೇಶಾಭಿಮಾನವನ್ನು ಜೋಡಿಸಿದರೆ, ಅದು ಆದರ ಬುದ್ಧಿಯಲ್ಲಿ ಪರಿಣಮಿಸುತ್ತದೆ. ಆ ಬಳಿಕ, ಈತನು ಶೈವನು ಈತನು ವೈಷ್ಣವನು ಎಂಬ ಅಭಿಮಾನದೊಡನೆಯೇ ಈತನು ಕನ್ನಡಿಗನು ಎಂಬ ಅಭಿಮಾನವು ಉದಿತವಾಗಿ, ಕರ್ಣಾಟಕದೊಳಗೆ ಹುಟ್ಟಿದ ಮಹಾಪುರುಷರೆಲ್ಲರ ವಿಷಯವಾಗಿಯೂ ಆದರಬುದ್ಧಿಯು ಮೊಳೆಯುತ್ತಿದೆ. ಈ ಬಗೆಯ ಆದರ ಬುದ್ಧಿಯೇ ನನಗೆ ಈ ಪ್ರಸ್ತಾವನೆಯನ್ನು ಬರೆಯುವದಕ್ಕೆ ಪ್ರೇರೇಪಿಸಿ ಇದೆ.

ಧಾರ್ಮಿಕ ಮಹಾಪುರುಷರ ಜೀವನಚರಿತೆಗಳನ್ನು ಬರೆಯುವದಕ್ಕೆ ಆ ವಿಭೂತಿಯಲ್ಲಿ ಪರಮ ವಿಶ್ವಾಸವುಳ್ಳವನೇ ಯೋಗ್ಯ ಅಧಿಕಾರಿಯು. ತನ್ನ ಧರ್ಮದ ರಹಸ್ಯಗಳು ತನಗೆ ನಿಚ್ಚಳವಾಗಿ ಹೊಳೆಯುವಂತೆ, ಅವು

ಮಿಕ್ಕವರಿಗೆ ಹೊಳೆಯಲಾರವು. ಹೊರಗಿನವರು ಎಷ್ಟೇ ಉದಾರಮತ ವಾದಿಗಳಿರಲಿ, ಎಷ್ಟೇ ಸಹಾನುಭೂತಿಯುಳ್ಳವರಿರಲಿ, ಜೀವನಚರಿತೆಯನ್ನು ಬರೆಯುವಾಗ ಅವರು ನಡುನಡುವೆ ಮುಗ್ಗರಿಸುವ್ವದೇ ನಿಶ್ಚಿತ. ಆದಕಾರಣ, ವಿಭೂತಿಗಳ ಚರಿತ್ರೆಯನ್ನು ಬರೆಯುವದಕ್ಕೆ ಭಕ್ತಿಯೇ ಬೇಕು, ಶ್ರದ್ಧೆಯೇಬೇಕು. ಶ್ರೀಯುತ ಹರ್ಡೇಕರ ಮಂಜಪ್ಪನವರು ಈ ತರಹದ ಶ್ರದ್ಧಾನ್ವಿತರಾಗಿ ಇದನ್ನು ಬರೆದಿರುವದರಿಂದ, ಅದು ಸ್ಫೂರ್ತಿದಾಯಕವಾಗಿದೆ. ತಾವು ವೀರಶೈವರಾಗಿರುವದರಿಂದ, ಧರ್ಮಾಭಿಮಾನದ ಮೂಲಕ, ತಕ್ಕಡಿಯು ಅಂಧಭಕ್ತಿಯಕಡೆಗೆ ಒಲಿದಿದ್ದರೆ, ನಾನು ಕಾಣೆಯನ್ನು ಕಟ್ಟಿ ಅದನ್ನು ಸರಿಪಡಿಸಿ ಸಮತೂಕವನ್ನಾಗಿ ಮಾಡಬೇಕೆಂದು ಅವರು ನನಗೆ ಪ್ರಸ್ತಾವನೆಯನ್ನು ಬರೆಯಲು ಹೇಳಿದಂತೆ ತೋರುತ್ತದೆ. ಆದರೆ ಅವರು ಐತಿಹಾಸಿಕ ದೃಷ್ಟಿಯನ್ನೂ ಅವಲಂಬಿಸಿ ದೇಶಾಭಿಮಾನದಿಂದ ಬರೆದಿರುವದರಿಂದ, ಆತರದ ಕಾಣೆಯನ್ನು ಕಟ್ಟುವ ಅವಶ್ಯಕತೆಯಿಲ್ಲವೆಂದು ನಾವು ಧಾರಾಳವಾಗಿ ಹೇಳುತ್ತೇವೆ.

ಬಸವಂಣನವರು ಕರ್ನಾಟಕದ ಮಹಾಪುರುಷರೆಂಬುದಕ್ಕೆ ನನ್ನಂಥ ಪರಧರ್ಮದವನ ಸಾಕ್ಷಿಯನ್ನು ಕೊಡುವದಷ್ಟೇ ಅವರ ಉದ್ದೇಶವೋ? ಹಾಗಿದ್ದರೆ, ಬಸವಣ್ಣನವರು ಮಹಾಪುರುಷರೆಂಬುದಕ್ಕೆ ಯಾರ ಸಾಕ್ಷಿಯೂ ಬೇಡ. ಅವರ ಚರಿತ್ರೆಯೇ ಅದಕ್ಕೆ ಸಾಕ್ಷಿ. ಎಂಟುವರ್ಷದ ಬಾಲಕನು ತನ್ನ ಮನಸ್ಸಿನಲ್ಲಿ ಗಹನಸಿದ್ಧಾಂತಗಳನ್ನು ಗಂಟುಹಾಕಿಕೊಂಡಿರುವದೇನು ಸಾಮಾನ್ಯಮನುಷ್ಯರ ಲಕ್ಷಣವೆ? ತನಗೆ ಸರಿದೋರಿದ ಆತತ್ವಗಳಿಗೋಸ್ಕರ ತಂದೆ ತಾಯಿ ಮನೆಮಾರುಗಳನ್ನು ತ್ಯಜಿಸುವ ಎದೆಗಾರಿಕೆಯನ್ನು ತೋರಿಸುವದೇನು ಪಾಮರರ ತುಷ್ಟೇ? ಅವರು ಮಹಾಪುರುಷರೆಂಬುದಕ್ಕೆ ಇದೊಂದೇ ಸಂಗತಿಯು ಸಾಕಲ್ಲವೇ? ಮುಂದಿನ ಅವರ ಚರಿತೆಯೂ ಈ ಅವರ ವೀರವೃತ್ತಿಗೆ ಅನುಗುಣವಾಗಿಯೇ ಇದೆ. ಅವರು ತಮಗೆ ತೋರಿದ ಸತ್ಯಕ್ಕಾಗಿ

ಸಮಾಜಸಂಕೋಲೆಗಳನ್ನು ಕತ್ತರಿಸಿ ಚೆಲ್ಲಿದರು ; ಜಗತ್ತಿನ ಉದ್ಧಾರಕ್ಕಾಗಿ ಅನೇಕ ಸಂಕಟಗಳನ್ನು ಸಹಿಸಿದರು. ಅಲ್ಪಾವಧಿಯಲ್ಲಿ, ಇದ್ದ ಸೃಷ್ಟಿಯನ್ನು ಸಂಹಾರಮಾಡಿ ಹೊಸ ಸೃಷ್ಟಿಯನ್ನು ನಿರ್ಮಿಸಿದರು, ಅಂದರೆ ಇದ್ದ ಸಮಾಜಸ್ಥಿತಿಯನ್ನು ಬೇರುಸಹಿತವಾಗಿ ಅಲ್ಲಾಡಿಸಿ, ಬೇರೊಂದು ಹೊಸ ಸಮಾಜಪದ್ಧತಿಯನ್ನು ಬೇರೂರಿದರು. ಇಂಥವರು ಸಾಮಾನ್ಯಪುರುಷರೇ?

ಬಸವಣ್ಣನವರ ಧರ್ಮಮತಗಳ ಬಗ್ಗೆ ಎಷ್ಟೇ ಮತಭೇದವಿದ್ದರೂ ಅವರ ಪರಮಾತ್ಮನಿಷ್ಠೆ, ನಿರ್ಮಲ ಸದಾಚಾರ, ಹೃದಯಕೋಮಲತೆ, ಉದಾತ್ತ ಉದ್ದೇಶ ಇವೇ ಮುಂತಾದ ಅವರ ಅಸಂಖ್ಯಾಕ ಗುಣಗಳನ್ನು ಯಾರೂ ಅಲ್ಲಗಳೆಯಲಾರರು. ಬಸವನು ಬಡವರ ಬೆಂಬಲಿಗನು, ಬಿದ್ದವರ ಎತ್ತಿಗನು, ಶಿವನ ಶರಣನು, ಶರಣರ ಸೇವಕನು, ಜನಜಂಗುಳಿಯ ಜನಕನು, ರಾಜಕಾರಣವನ್ನು ವಹಿಸಿದ್ದರೂ ರಾಜಭೋಗದಿಂದ ಅಲಿಪ್ತನು. ಶಿವಶರಣರೆಲ್ಲರೂ (ಮನುಷ್ಯರೆಲ್ಲರೂ ಅಲ್ಲ) ಸಮಾನರೆಂಬುದೇ ಬಸವಣ್ಣನವರ ತತ್ವ. ಗುರುಲಿಂಗಜಂಗಮವೆಂಬುದೇ ವೀರಶೈವರ ತ್ರಿಕುಟಾಚಲ. ವೀರಶೈವಧರ್ಮದ ಪ್ರಾಕಾರದಲ್ಲಿ ಎಲ್ಲರಿಗೂ ಪ್ರವೇಶವಿದ್ದರೂ, ಅದರ ದೇವಾಲಯದ ಗರ್ಭಗುಡಿಯವರೆಗೆ ಪ್ರವೇಶಿಸಿ ಶಿವೈಕ್ಯವಾಗುವವರೆಗೆ ಅಧಿಕಾರಭೇದದಿಂದ ಅನೇಕ ಪ್ರಭೇದಗಳು ಕಲ್ಪಿಸಲ್ಪಟ್ಟಿವೆ. ಅವರು ಮುಕ್ತಿಯ ಮಾರ್ಗದ ಮಹಾದ್ವಾರವನ್ನು ಸರ್ವರಿಗೂ ಮುಕ್ತದ್ವಾರವನ್ನಾಗಿ ಮಾಡಿದರು.

ತಮ್ಮ ಧರ್ಮ ಸಮಾಜವನ್ನು ಸ್ವಯಂಪೂರ್ಣವಾಗಿ ಮಾಡುವ ಬಸವಣ್ಣನವರ ಕಲ್ಪನೆಯಂತೂ ತೀರ ಹೊಸದು. ಒಕ್ಕಲಿಗ, ಅಗಸ, ಅಕ್ಕಸಾಲಿಗ, ಅಂತ್ಯಜ ಮುಂತಾದ ವಿವಿಧ ಉದ್ಯೋಗದವರೆಲ್ಲರಿಗೂ ಇವರು ದೀಕ್ಷೆಯನ್ನು ಕೊಟ್ಟು, ತಮ್ಮ ಸಮಾಜವನ್ನು ಪೂರ್ಣವಾಗಿ ಸ್ವಾವಲಂಬಿಯು

ನ್ನಾಗಿ ಮಾಡಿರುವರು. ಇವರ ಉಪದೇಶದಿಂದ ಕರ್ಣಾಟಕದ ಬಹುಜನ ಸಮಾಜವು ಸದಾಚಾರಸಂಪನ್ನವಾಯಿತು. ಬಸವಣ್ಣನವರ ಪುಣ್ಯದಿಂದ ಲೇ, ಕರ್ಣಾಟಕದ ಬಹುಜನ ಸಮಾಜವು ಮಿಕ್ಕ ಪ್ರಾಂತಗಳಂತೆ ಮದ್ಯ ಮಾಂಸಾದಿ ದುರ್ವ್ಯಸನಗಳಿಗೀಡಾಗದೆ, ಇಂದಿಗೂ ಶುಚಿರ್ಭೂತವಾಗಿಯೇ ಉಳಿದಿದೆ. ಈ ಅವರ ಉಪಕಾರವನ್ನು ಕರ್ಣಾಟಕವು ಎಂದಿಗೂ ಮರೆಯಲಾರದು.

ಬಸವಣ್ಣನವರು ಭಾಷಾಪಂಡಿತರಲ್ಲ, ಭಾಷಾಜನಕರು. ಅವರ ವಚನಗಳು, ಕನ್ನಡ ನುಡಿಯು ಎಷ್ಟು ವೀರ್ಯವತ್ತವಾಗಬಹುದೆಂಬುದನ್ನು ತೋರಿಸುತ್ತವೆ. ಅವರ ಹೃದಯವು ಕರಗಿ ನೀರಾಗಿ ಅದು ವಚನಗಳ ರೂಪದಲ್ಲಿ ಹರಿದಿದೆ. ಆ ಪ್ರವಾಹದಲ್ಲಿ ಅವರ ವಿಚಾರಗಳು ಬೋರ್ಗರೆಯುತ್ತಿವೆ. ಅಲ್ಲಿ ಅವರ ಅಂತರಂಗದ ಅಲೆಗಳು ನಲಿಯುತ್ತಿವೆ, ತತ್ವರತ್ನಗಳು ಥಳಥಳಿಸುತ್ತಿವೆ. ಆ ವಚನಗಳಲ್ಲಿ ನಾವೀನ್ಯವು ಮಿನುಗುತ್ತಿದೆ, ತೇಜವು ತುಳುಕುತ್ತಿದೆ. ಅವು ಅವರ ಮಿದುವಾದ ಒಳ ಎದೆಯ ಒಡನುಡಿಗಳು ; ನಂಜಿನ ನಾಲಿಗೆಯ ಬಿರುನುಡಿಗಳಲ್ಲ. ಈ ವಚನಗಳಲ್ಲಿ ಅವರ ಅಂತಃಕರಣವು ಹೆಪ್ಪುಗಟ್ಟಿರುತ್ತದೆ, ಸಾಧುವೃತ್ತಿಯ ಸೊನೆಯು ಸುರಿಯುತ್ತಿದೆ, ಅನುಭವದ ಕಾಠಿಣ್ಯವು ಕಂಗೊಳಿಸುತ್ತಿದೆ. ಅವರ ಆಚಾರದ ಕೆಚ್ಚು ಅಲ್ಲಿ ಕಾಣುತ್ತಿದೆ. ವಿಚಾರದ ಅಚ್ಚು ಅಲ್ಲಿ ಅಚಲವಾಗಿದೆ. ಬಸವಣ್ಣನವರ ಈ ವಚನಗಳು ಕನ್ನಡ ಭಾಷಾಪ್ರವಾಹವನ್ನು ಹೊಸಬದಿಗೆ ತಿರುಗಿಸಿದವು.

ಕರ್ನಾಟಕದಲ್ಲಿ ಶಿಲಾಲಿಪಿಗಳು ವೆಗ್ಗಳವಾಗಿ ದೊರೆಯುವದರಿಂದ, ಆ ಮಾರ್ಗದಿಂದ ಪ್ರಯತ್ನಮಾಡಿದರೆ ಬಸವಣ್ಣನವರ ಚರಿತ್ರೆಯ ಮೇಲೂ ಹೆಚ್ಚಿಗೆ ಬೆಳಕುಬೀಳುವ ಸಂಭವವುಂಟು. ಆ ಮಾರ್ಗದಿಂದ

ಇನ್ನೂ ಆಗತಕ್ಕಷ್ಟು ಪ್ರಯತ್ನವಾಗಿಲ್ಲ. ಕಪ್ಪಡಿ ಸಂಗಮಕ್ಕೆ ನಾನು ಹೋದಾಗ, ಗುಡಿಯಹತ್ತರವೇ ಒಂದು ಶಿಲಾಲಿಪಿಯು ನೆಲದಲ್ಲಿ ಹೂಳಿ ಹೋದದ್ದು ದೃಷ್ಟಿಗೆ ಬಿದ್ದಿತು. ಅದನ್ನು ಕೀಳಿಸಿ ಅದರ ಮುದ್ರಣವನ್ನು ತಕ್ಕೊಂಡೆನು. ಇಂಥ ಎಷ್ಟು ಶಿಲಾ ಲಿಪಿಗಳು ಇನ್ನು ಎಷ್ಟಿರುವವೋ ದೇವರೇ ಬಲ್ಲ. ಅವುಗಳೆಲ್ಲವನ್ನು ಶೋಧಿಸದೆ, ಬಸವಣ್ಣನವರ ಚರಿತ್ರೆಯು ಪೂರ್ಣವಾಗಲಾರದು. ಕರ್ನಾಟಕಸ್ಥರು ಅವುಗಳನ್ನು ಶೋಧಿಸಿ ಇದಕ್ಕಿಂತ ವಿಸ್ತಾರವಾದ ಚರಿತ್ರೆಯನ್ನು ಬರೆದು ಪಿತೃಋಣವನ್ನು ತೀರಸುವರೆಂದು ನಂಬಿದ್ದೇನೆ.

ಧಾರವಾಡ,
೬-೫-೧೯೨೪(ಬಸವಜಯಂತಿ.)

ವೆಂಕಟೇಶಭೀಮರಾವ ಆಲೂರ.



॥ ಓಂ ॥

ಶ್ರೀ ಬಸವಾದಿ ಪ್ರಮಥರಂತೆ ನುಡಿದು, ನುಡಿದಂತೆ ನಡೆದು,

ಪರಮ ಪೂಜ್ಯರಾಗಿ ಲಿಂಗೈಕ್ಯರಾದ

ಶ್ರೀಮನ್ನಿರಂಜನ



ಅಥಣಿ ಶ್ರೀ ಮುರಘೇಂದ್ರ

ಮಹಾ ಶಿವಯೋಗಿಗಳವರ ಪಾದಸಂದರ್ಶನದ

ಸ್ಮರಣಾರ್ಥವಾಗಿ, ಆ ಮಹಾತಪಸ್ವಿಗಳ ಚಿತ್ಕಳೆಗೆ

ಈ ಗ್ರಂಥ ಕುಸುಮವು ಗ್ರಂಥಕರ್ತನಿಂದ

ಸಮರ್ಪಿಸಲ್ಪಟ್ಟಿದೆ.



# ಪೀಠಿಕೆ.

ಅಸಮಲಿಂಗಾಂಗೈಕ್ಯಭಾವದ |
ಬಸವನಂಬೇರೊಂದುಭಾವದೊ |
ಳೊಸೆದುಕೀರ್ತಿಸಲಹುದೆಯಿದುತಪ್ಪೆಂದುನುಡಿಯದಿರಿ ||
ವಸುಮತಿಗೆಶಿವಭಕ್ತಿಯಂಪಸ |
ರಿಸುವವಂತಾನಾಗಿಯಾತನ |
ದೆಸೆಯೊಳೆಲ್ಲಾ ಧನ್ಯರಾದಪರೆಂದುನುತಿಸುವೆನು † ||

ಭೀಮಕವಿ.

ಶ್ರೀ ಬಸವಮಹಾತ್ಮನ ಮಹತ್ವವನ್ನು ಕುರಿತು ಸಿಂಗಿರಾಜ, ಪಾಲ್ಕುರಿಕೆ ಸೋಮನಾರಾಧ್ಯ, ಭೀಮಕವಿ, ಷಡಕ್ಷರದೇವ, ಮೊದಲಾದ ಅನೇಕ ಕವಿಶ್ರೇಷ್ಠರು ತಮ್ಮ ಅಸಾಧಾರಣವಾದ ಭಕ್ತಿ ಜ್ಞಾನಾದಿಗಳಿಗೆ ತಕ್ಕಂತೆ ದಿವ್ಯವಾಣಿಯಿಂದ ಹೃದಯಂಗಮವಾಗಿ ಪೌರಾಣಿಕರೀತಿಯಲ್ಲಿ ವಿವರಿಸಿದ್ದಾರಷ್ಟೆ. ಆದರೆ ಆ ಕಾಲದ ಅಂತಹ ಭಕ್ತಿಯು ಜನಾಂಗದಲ್ಲಿ ಲೋಪವಾಗಿ ಚಿಕಿತ್ಸಕ ಬುದ್ಧಿಯು ಪ್ರಬಲವಾಗುತ್ತಿರುವ ಈ ಕಾಲದಲ್ಲಿ ಆ ಶ್ರೇಷ್ಠತರವಾದ ಗ್ರಂಥಗಳು ಮಹಾನುಭಾವರಾದ ಬಸವಣ್ಣನವರ ಶ್ರೇಷ್ಠತ್ವವನ್ನು ಮತ್ತು ಅವರ ಕಾರ್ಯಕ್ರಮಗಳನ್ನು ತಿಳಿದುಕೊಳ್ಳಲು ಅಷ್ಟು ಸಹಾಯವಾಗುವಂತಿಲ್ಲದಿದ್ದುದರಿಂದ ಈಗಿನ ಕಾಲಕ್ಕೆ ತಕ್ಕಂತೆ ಐತಿಹಾಸಿಕರೀತಿಯಲ್ಲಿ ಆ ಮಹಾತ್ಮರ ಚರಿತ್ರೆಯನ್ನು ಬರೆಯುವುದು ಆವಶ್ಯಕವಾಗಿ ತೋರಿತು.

ಕರ್ನಾಟಕದ ಆಗಿನ ಚರಿತ್ರೆಯನ್ನು ಬರೆದವರಲ್ಲನೇಕರು * ಈ ಮಹಾನುಭಾವರ ವಿಷಯದಲ್ಲಿಯೂ, ವೀರಶೈವಮತದ ವಿಷಯದಲ್ಲಿಯೂ,

† ಕನ್ನಡ ಬಸವಪುರಾಣ ಸಂಧಿ ೧, ೨೪.

* ಕ್ರಿ. ಶ. ೧೬೫೦ ರಲ್ಲಿದ್ದ ಧರಣಿಪಂಡಿತನೆಂಬ ಜೈನಕವಿಯು ಬಿಜ್ಜಳಚರಿತ್ರೆ

ಅನುಚಿತವಾದ ಅನೇಕ ಸುಳ್ಳು ಸಂಗತಿಗಳನ್ನು ಬರೆದಿರುವುದರಿಂದ ಐತಿಹಾಸಿಕ ದೃಷ್ಟಿಯಿಂದೋದುವವರಿಗೆ ಆ ಸುಳ್ಳು ಸಂಗತಿಗಳೇ ನಿಜಾಂಶಗಳೆಂದು ತಿಳಿದುಕೊಳ್ಳಲವಕಾಶವಿರುವುದರಿಂದಲಂತೂ ಈ ಮಹಾನುಭಾವರ ಚರಿತ್ರೆಯನ್ನು ಬರೆಯುವುದು ಅತ್ಯಾವಶ್ಯಕವೆಂದೇ ಸಿದ್ಧವಾಗುತ್ತದೆ. ಮಹಾನುಭಾವರಾದ ಈ ಬಸವಣ್ಣನವರ ವಿಷಯದಲ್ಲಿ ಐತಿಹಾಸಿಕ ಗ್ರಂಥಗಳಲ್ಲಿಯೂ ಸುಳ್ಳು ಸಂಗತಿಗಳೇ ಹೆಚ್ಚು ಪ್ರಕಟವಾಗುವುದರಿಂದ ಪರಮತೀಯರಲ್ಲಿಯೇ ಅಲ್ಲ, ಸ್ವಮತೀಯರಲ್ಲಿಯೂ ಶ್ರೀ ಬಸವಣ್ಣನವರ ವಿಷಯಕ್ಕೆ ತಪ್ಪು ಅಭಿಪ್ರಾಯವೂ, ತಿರಸ್ಕಾರಭಾವನೆಯೂ ಉಂಟಾಗಲವಕಾಶವಾಗುತ್ತದೆ. ಯಾವ ಪರಮಪೂಜ್ಯನಾದ ಮಹಾತ್ಮನ ವಿಷಯದಲ್ಲಿ ಲಕ್ಷಾಂತರಜನಗಳಿಗೆ ಅಸಾಧಾರಣವಾದ ಭಕ್ತಿ ವಿಶ್ವಾಸಗಳಿವೆಯೋ ಆ ಮಹಾನುಭಾವನ ವಿಷಯದಲ್ಲಿಯೇ ಅನ್ಯಮತೀಯರಲ್ಲಿ ಅನಾದರಣೆಯು ನೆಲೆಗೊಳಿಸಿದರೆ, ಆತನು ಪೂಜ್ಯನೆಂದು ತಿಳಿದುಕೊಂಡಿರುವ ಸಮಾಜದ ವಿಷಯದಲ್ಲಿ ಆದರಬುದ್ಧಿಯುಂಟಾಗುವುದು ಸಾಧ್ಯವೇ? ಆದಕಾರಣ ಶ್ರೀ ಬಸವಣ್ಣನವರ ವಿಷಯವು ಐತಿಹಾಸಿಕರೀತಿಯಲ್ಲಿ ಬರೆಯಲ್ಪಡತಕ್ಕದು ಅತ್ಯಾವಶ್ಯಕವೆಂದೇ ವಾಚಕರಿಗೆ ವ್ಯಕ್ತವಾಗದಿರಲಾರದು.

---

ಯಲ್ಲಿ, ಇದಕ್ಕೆ ಕ್ರಿ. ಶ. ೧೯೧೦ ರಲ್ಲಿ ಪೀಠಿಕೆಯನ್ನು ಬರೆದ ಬೆಂಗಳೂರಿನ ಶ್ರೀಯುತ ದೊಡ್ಡಬೆಲೆ ಆನಂದ ತೀರ್ಥಾಚಾರ್ಯರು, ಶ್ರೀಯುತ ಆರ್. ಜಿ. ಭಾಂಡಾರಕರ್ ರವರು The Early History of the Dekkan ಎಂಬ ಗ್ರಂಥದ ೨೨೬ ನೆಯ ಪುಟದಲ್ಲಿಯು, ಶ್ರೀಯುತ ರಾಮಚಂದ್ರ ಹಣಮಂತ ದೇಶಪಾಂಡೆ ಇವರು ಭರತಖಂಡದ ಧರ್ಮಸ್ಥಾಪಕರೂ ಧರ್ಮಸುಧಾರಕರೂ ಎಂಬ ಪುಸ್ತಕದ ೪೬ ನೆಯ ಪುಟದಲ್ಲಿಯು, ಶ್ರೀಯುತ ಎಸ್. ಕೃಷ್ಣಸ್ವಾಮಿ ಅಯಂಗಾರ್ಯರು Ancient India ಎಂಬ ಗ್ರಂಥದ ೨೨೦ ನೆಯ ಪುಟದಲ್ಲಿಯು, ಶ್ರೀಯುತ ಪಂಡಿತ ಶಿವಶಂಕರಮಿಶ್ರ ಎಂಬುವವರು "ಭಾರತಕಾ ಧಾರ್ಮಿಕ ಇತಿಹಾಸ" ಎಂಬ ಗ್ರಂಥದ ೧೮೩ ನೆಯ ಪುಟದಲ್ಲಿಯು, ಮಿ. ವಿನ್‌ಸೆಂಟ್ ಎ. ಸ್ಮಿಥ್‌ರವರು Early History of India ಎಂಬ ಗ್ರಂಥದ ೪೩೨ ನೆಯ ಪುಟದಲ್ಲಿಯು, ಮಿ. ಎ. ಬಾರ್ಥ್‌ರವರು

ಈ ಮಹಾನುಭಾವರ ವಿಷಯವಾಗಿ ಐತಿಹಾಸಿಕ ಪದ್ಧತಿಯಿಂದ ಬರೆಯುತ್ತಿದ್ದುದು ಇದೇ ಮೊದಲು. ಇದಕ್ಕೆ ಬೇಕಾಗುವ ಆ ಕಾಲದ ಐತಿಹಾಸಿಕ ಆಧಾರಗಳೂ ಅತ್ಯಲ್ಪ. ಇಂತಹ ಸ್ಥಿತಿಯಲ್ಲಿ ಬರೆಯಲುಪಕ್ರಮಿಸಿರುವ ನಾನಾದರೋ, ಈ ಸಂಬಂಧವಾದ ಸಂಗತಿಗಳನ್ನು ಸಂಗ್ರಹಿಸಲು ಎಷ್ಟೋ ಅಸಮರ್ಥ. ಈಗ ಈ ಮಹಾನುಭಾವರ ವಿಷಯವಂತೂ ಅತ್ಯಂತ ವಾದಗ್ರಸ್ತವಾದುದಾಗಿದೆ. ಹೀಗಿರುವಾಗ ಸಹೃದಯರಾದ ಜಿಜ್ಞಾಸುಗಳಿಗೆ ಈ ಚರಿತ್ರೆಯು ತುಂಬಾ ಅತೃಪ್ತಿಕರವಾಗಿ ತೋರುವುದು ಸ್ವಾಭಾವಿಕವಾಗಿದೆ. ಶ್ರೀ ಬಸವಣ್ಣನವರಿಗೆ ಸಂಬಂಧಿಸಿರುವ ಸ್ಥಳಗಳಲ್ಲಿ ವಿಶೇಷ ಸಂಗತಿಗಳೇನಾದರೂ ದೊರೆಯಬಹುದೆಂದು ಆಯಾಯ ಸ್ಥಳಗಳಿಗೆ ಹೋಗಿ ನೋಡಲು ಅಂತಹ ಹೆಚ್ಚಿನ ಸಂಗತಿಗಳೇನೂ ಗೊತ್ತಾಗಲಿಲ್ಲ. ಶ್ರೀ ಬಸವಣ್ಣನವರ ಜನ್ಮಸ್ಥಳವಾದ ಬಾಗೇವಾಡಿಯಲ್ಲಿ ಈ ಮಹಾನುಭಾವರು ಯಾವ ಮಾದರಸನ ವಂಶದಲ್ಲಿ ಜನ್ಮವೆತ್ತಿದರೋ ಆ ವಂಶಜರು ಈಗಲೂ ಇದ್ದರುಕೂಡಾ ಅವರಲ್ಲಿ ಪ್ರಾಚೀನಕಾಲದ ಯಾವ ವಿಶೇಷಸಂಗತಿಗಳೂ ದೊರೆಯುವಂತಿಲ್ಲ. ಶ್ರೀ ಬಸವಣ್ಣನವರು ತಮ್ಮ ಗುರುಗಳಲ್ಲಿ ವಾಸವಾಗಿದ್ದ ಆ ಕಪ್ಪಡಿಸಂಗಮ ಕ್ಷೇತ್ರದಲ್ಲಿಯೂ ಯಾವ ಹೊಸ ವಿಷಯಗಳು ನನಗೆ ಗೊತ್ತಾಗಲಿಲ್ಲ. ಯಾವ ಕಲ್ಯಾಣಪಟ್ಟಣದಲ್ಲಿ ಈ ಪೂಜ್ಯರು ಸಾಧಾರಣ ಹತ್ತುವರ್ಷ ವಾಸವಾಗಿದ್ದು ಜನಾಂಗೋನ್ನತಿಯ ಅತ್ಯದ್ಭುತ ಕಾರ್ಯವನ್ನು ಮಾಡಿದರೋ ಆ ಪ್ರಾಚೀನ ಐತಿಹಾಸಿಕ ಪ್ರಸಿದ್ಧ ಸ್ಥಳದಲ್ಲಿಯೂ ಈ ಮಹಾನುಭಾವರ ವಿಷಯವಾಗಿ ನೂತನ ಸಂಗತಿಗಳಾವುವೂ ತಿಳಿಯಲಿಲ್ಲ.

ಕಲ್ಯಾಣಪಟ್ಟಣವು ಗುಲಬರ್ಗಾದಿಂದ ಸಾಧಾರಣ ೪೦ ಮೈಲುಗಳ

---

The Religions of India ಎಂಬ ಗ್ರಂಥದ ೨೦೮ ನೆಯ ಪುಟದಲ್ಲಿಯು, ಮಿ. ಹಾಪ್‌ಕಿನ್ಸ್‌ರವರು The Religions of India ಎಂಬ ಗ್ರಂಥದ ೪೮೨ ನೆಯ ಪುಟದಲ್ಲಿಯು, ಬಸವಣ್ಣನವರ ವಿಷಯದಲ್ಲಿ ಬರೆದ ಎಷ್ಟೋ ಅಸತ್ಯಸಂಗತಿಗಳನ್ನೇ ಅನೇಕರು ಆಧಾರವಾಗಿಟ್ಟುಕೊಂಡಿದ್ದಾರೆ।

ದೂರದಲ್ಲಿ ನೈಜಾಮ ಪ್ರಾಂತ್ಯದಲ್ಲಿದೆ. ಆ ಪ್ರಾಚೀನಪಟ್ಟಣದ ಈಗಿನ ಜನ ಸಂಖ್ಯೆ ಸಾಧಾರಣ ಹತ್ತುಸಾವಿರ. ಅಲ್ಲಿ ವೀರಶೈವರ ಸಂಖ್ಯೆ ಸುಮಾರು ಒಂದುಸಾವಿರ. ಮುಸಲ್ಮಾನರೇ ಅಲ್ಲಿ ಅಧಿಕ. ಕಲ್ಯಾಣವು ಕಟಕರ ಕೇರಿ ಯಾಗಲೆಂದು ಶರಣರು ಆ ಕಾಲದಲ್ಲಿ ಶಪಿಸಿದರೆಂಬುದು ಆ ಊರೊಳಗೆ ಹೋದೊಡನೆಯೇ ಜ್ಞಾಪಕವಾಗುತ್ತದೆ. ಬಸವಣ್ಣನವರ ಪರಸುಗಟ್ಟೆ ಎಂದು ಈಗಲೂ ಕರೆಯಲ್ಪಡುತ್ತಿರುವ ಒಂದು ಸ್ಥಳವು ಆ ಊರಲ್ಲಿದೆ. ಆ ಸ್ಥಳದ ಲ್ಲಿಯೇ ಬಸವಣ್ಣನವರು ಕುಳಿತು ದಾನಮಾಡುತ್ತಿದ್ದರಂತೆ. ಈಗ ಅದೇ ಸ್ಥಳದಲ್ಲಿ ಮಾಂಸವನ್ನು ಮಾರುತ್ತಿದ್ದಾರೆ. ಆ ಸ್ಥಳದಲ್ಲಿ ವ್ಯಾಪಾರವು ಹೆಚ್ಚಾಗುತ್ತದೆಂದು ಜನಗಳ ನಂಬಿಕೆಯಿರುವಕಾರಣ ಮಾಂಸದ ವ್ಯಾಪಾರಿ ಗಳು ಆ ಸ್ಥಳವನ್ನು ವರ್ಷಕ್ಕೆ ಸುಮಾರು ೨೫೦ ರೂ. ಗಳವರೆಗೆ ಸರಕಾ ರಕ್ಕೆ ಬಾಡಿಗೆ ಕೊಟ್ಟು ಪೋಟಾಪೋಟಿ ಮಾಡಿ ತೆಗೆದುಕೊಳ್ಳುತ್ತಿದ್ದಾರೆ.

ಈ ಊರಿನಿಂದ ಸಾಧಾರಣ ಮೂರುಮೈಲುಗಳೊಳಗಾಗಿ ಅಕ್ಕನಾ ಗಮ್ಮನವರ ಗವಿ ಎಂಬದೊಂದು ಕಲ್ಲಿನ ಬಹು ವಿಶಾಲವಾದ ಗವಿಯಿದೆ. ಇದು ಜನಗಳ ಬಳಕೆಯಲ್ಲಿಲ್ಲದಿದ್ದುದರಿಂದ ಒಳಗೆ ಸಾಧಾರಣ ४೦-೫೦ ಮೊಳಗಳಿಗಿಂತ ದೂರವಾಗಿ ಹೋಗಲಿಕ್ಕೆ ಬರುವಂತಿಲ್ಲ. ಅದರ ಹತ್ತಿರದ ಲ್ಲಿಯೇ ತ್ರಿಪುರಾಂತಕ ಕೆರೆಯಿದೆ. ಆ ಕೆರೆಯ ಹತ್ತಿರದಲ್ಲಿ ಶ್ರೀ ಮಡಿವಳ ಮಾಚಿದೇವರು ಬಟ್ಟೆಗಳನ್ನು ತೊಳೆಯುತ್ತಿದ್ದ ಕೊಳವು, ಆ ಕೊಳದ ಮೇ ಲ್ಭಾಗದಲ್ಲಿ ಒಂದು ಚಿಕ್ಕದಾದ ಶಿಲಾಮಯ ಶಿವಾಲಯವು ಇವೆ. ಅಲ್ಲಿಂದ ಸ್ವಲ್ಪ ದೂರದಲ್ಲಿ ಒಂದು ದೊಡ್ಡದಾದ ಪ್ರಾಚೀನ ಶಿಲಾಮಯ ಕಟ್ಟಡವು, ಅದರ ಮಧ್ಯದಲ್ಲಿ ಒಂದು ಗದ್ದುಗೆಯೂ ಇವೆ. ಆ ಗದ್ದುಗೆಯಿದ್ದ ಸ್ಥಳದ ಲ್ಲಿಯೇ ಶ್ರೀ ಪ್ರಭುದೇವರು ಮುಹೂರ್ತಗೊಂಡಿದ್ದರಂತೆ. ಅಲ್ಲಿ ಪೂರ್ವದಿಂ ದಲೂ ಶ್ರೀ ವಿರಕ್ತಸ್ವಾಮಿಗಳವರು ಇರುತ್ತಾ ಬಂದಿದ್ದಾರೆ. ಕಲ್ಯಾಣದಿಂದ ಸಾಧಾರಣ ೯ ಮೈಲುಗಳ ದೂರದಲ್ಲಿ ಮೋಳಗಿಕೇರಿ ಎಂಬದೊಂದು ಚಿಕ್ಕ ಹಳ್ಳಿಯಿದೆ. ಅಲ್ಲಿ ಆ ಕಾಲದ ಮಹಾ ಶಿವಶರಣರಾದ ಶ್ರೀ ಮೋಳಗಿ ಮಾ

ಗಯ್ಯನವರ ೧೫ ಅಂಕಣಗಳ ವಿಶಾಲವಾದ ಒಂದು ಗವಿಯಿದೆ. ಅದು ಈಗಲುಕೂಡಾ ವಾಸವಾಗಿರುವಂತೆ ಜನಗಳ ಬಳಕೆಯಲ್ಲಿದೆ. ಅದರಹೊಂದಿಗೆ ಆಲದಮರದಂತಹ ಒಂದು ದೊಡ್ಡ ಮರವಿದೆ. ಅದಕ್ಕೆ ಮಾರಯ್ಯನ ಮರವೆಂದು ಹೇಳುತ್ತಿದ್ದಾರೆ. ಅದು ಯಾವಜಾತಿಯ ವೃಕ್ಷವೆಂಬುದು ಅಲ್ಲಿಯವರಿಗೆ ಗೊತ್ತಿಲ್ಲ. ಒಂದುಮರವು ಮುಪ್ಪಾದನಂತರ ಅದರ ಬೇರಿನಿಂದಲೇ ಇನ್ನೊಂದು ಗಿಡವಾಗುವಂತೆ ತೋರುತ್ತದೆ. ಈ ಪ್ರಕಾರ ಈಗ ಒಂದು ಮುಪ್ಪಾದ ಮರವು ಮತ್ತೊಂದು ಚಿಕ್ಕಗಿಡವು ಅಲ್ಲಿವೆ. ಕಟ್ಟಿಗೆ ಹೊರೆಯನ್ನು ತರುವ ಕಾಯಕಮಾಡುತ್ತಿದ್ದ ಆ ಶ್ರೀ ಮೋಳಿಗೆ ಮಾರಯ್ಯನವರ ಕಟ್ಟಿಗೆ ಹೊರೆಯೇ, ಚಿಗಿತು ಈ ಗಿಡವಾಗಿದೆಯೆಂದು ಅಲ್ಲಿಯ ಜನರು ಹೇಳುತ್ತಿದ್ದಾರೆ. ಈ ಗವಿಯಿಂದ ಒಂದುಮೈಲಿ ದೂರದಲ್ಲಿ ಆ ಕಾಲದ ಶ್ರೀ ಮುಗ್ಧಸಂಗಯ್ಯನವರ ಗವಿಯಿದೆ. ಅದುಕೂಡಾ ತಕ್ಕಮಟ್ಟಿಗೆ ವಾಸವಾಗಿರಲು ಬರುವಂತೆಯೇ ಇದೆ. ಅಲ್ಲಿರತಕ್ಕ ಈ ಗುರುತುಗಳೆಲ್ಲಾ ಮಹಾತ್ಮರಾದ ಬಸವಣ್ಣನವರ ಚರಿತ್ರೆಗೆ ವಿಶೇಷಸಂಬಂಧ ಪಡುವಂತಿಲ್ಲದಿದ್ದರೂ ಆ ಕಾಲದಲ್ಲಿ ಕಲ್ಯಾಣಪಟ್ಟಣವು ಉತ್ತರ ದಕ್ಷಿಣ ೧೦-೧೨ ಮೈಲು ವಿಸ್ತಾರವಾಗಿದ್ದಿತೆಂದು ಇವುಗಳ ಮೇಲಿಂದ ಸ್ಪಷ್ಟವಾಗುತ್ತದೆ.

ಶ್ರೀ ಬಸವಣ್ಣನವರಿಗೆ ಸಂಬಂಧಪಟ್ಟಿರುವ ಐತಿಹಾಸಿಕ ಸ್ಥಳಗಳಲ್ಲಿ ವಿಶೇಷಸಂಗತಿಗಳು ತಿಳಿಯದಿದ್ದರೂ ಆ ಕಾಲದಲ್ಲಿಯೇ ಐತಿಹಾಸಿಕರೀತಿಯಿಂದ ಬರೆದ ಗ್ರಂಥಗಳಾದರೂ ಇವೆಯೇ? ಅವೂ ಇಲ್ಲ. ಆದಕಾರಣ ಪೌರಾಣಿಕರೀತಿಯಲ್ಲಿ ಬರೆದ ಗ್ರಂಥಗಳನ್ನೇ ಆಶ್ರಯಿಸಿ ಅವುಗಳಲ್ಲಿ ಏಕರೂಪತೆಯಿಲ್ಲದಿದ್ದರೂ ದೊರೆಯತಕ್ಕ ಸಂಗತಿಗಳ ಮೇಲಿಂದಲೇ ಸಿದ್ಧಾಂತವೇನಿರಬಹುದೆಂಬುದನ್ನು ಗೊತ್ತುಮಾಡಬೇಕಾಗಿದೆ. ಈ ವಿಷಯದಲ್ಲಿ ಸತ್ಯಾಸತ್ಯತೆಗಳನ್ನು ನಿರ್ಧರಿಸಲು ಆ ಮಹಾನುಭಾವರ ವಚನಗಳು ಎಷ್ಟೋ ಸಹಾಯವಾಗುವಂತಿವೆ. ಅವುಗಳ ಮೇಲಿಂದಲು ಮತ್ತು ಆ ಮಹಾತ್ಮರ ವಿಷಯಕವಾಗಿ ಬರೆದಿರುವ ಪುರಾಣಗಳ ಮೇಲಿಂದಲು ಈ ಚರಿತ್ರೆಯು ಬರೆಯಲ್ಪಟ್ಟಿದೆ.

ಈ ಪುರಾಣಗಳಲ್ಲಿ ಹೆಚ್ಚು ಪ್ರಾಚೀನವಾದವುಗಳೇ ಹೆಚ್ಚು ವಿಶ್ವಾಸನೀಯವಾದವುಗಳೆಂದು ತಿಳಿಯುವುದು ಯುಕ್ತವಷ್ಟೆ. ಆದಕಾರಣ ಶ್ರೀ ಬಸವಣ್ಣನವರ ವಿಷಯದಲ್ಲಿ ಬರೆಯಲ್ಪಟ್ಟಿರುವ ಗ್ರಂಥಗಳಲ್ಲೆಲ್ಲಾ ಸಿಂಗಿರಾಜ ಪುರಾಣವೇ ಹೆಚ್ಚು ಪ್ರಾಚೀನವಾದುದಾಗಿರುವುದರಿಂದ ಅದನ್ನೇ ಮುಖ್ಯವಾಗಿಟ್ಟುಕೊಂಡಿದ್ದೇನೆ. ಈ ಸಿಂಗಿರಾಜನು ಕ್ರಿ. ಶ. ೧೬೫೦ ರಲ್ಲಿರಬಹುದೆಂದು ಊಹಿಸುವುದಾಗಿ ಶ್ರೀಯುತ ಆರ್. ನರಸಿಂಹಾಚಾರ್ಯರವರು ತಮ್ಮ ಕವಿಚರಿತೆಯಲ್ಲಿ ಹೇಳಿದ್ದಾರೆ. ಇದು ಸರಿಯೆಂದು ತೋರುವುದಿಲ್ಲ. ಏಕೆಂದರೆ, ಸಿಂಗಿರಾಜನು ಬಿಜ್ಜಳನ ಕಾಲದಲ್ಲಿ ಆತನ ಒಬ್ಬ ಮಾಂಡಲಿಕನಾಗಿದ್ದನೆಂತಲೂ, ಬಿಜ್ಜಳನು ಶಿವಮತ ಪ್ರಸಾರಗೊಳಿಸಲು ತನ್ನ ಮಂತ್ರಿಯಾದ ಬಸವಣ್ಣನವರಿಗೆ ಅವಕಾಶ ಕೊಟ್ಟುದರಿಂದ ವೈಷ್ಣವನಾದ ಈ ಸಿಂಗಿರಾಜನು ಆ ಬಿಜ್ಜಳರಾಜನಿಗೆ ಕೊಡುತ್ತಿದ್ದ ಕಪ್ಪವನ್ನು ನಿಲ್ಲಿಸಲು, ಬಸವಣ್ಣನವರು ಅರಮನೆಗೆ ಹೋಗಿ ಬರುತ್ತಿದ್ದ ಮಾರ್ಗಮಧ್ಯದಲ್ಲಿ ಬಿಜ್ಜಳನು ಸಿಂಗಿರಾಜನನ್ನು ಪಂಜರದಲ್ಲಿಡಿಸಿದನೆಂತಲೂ, ಅನಂತರ ಸಿಂಗಿರಾಜನು ಪ್ರತಿನಿತ್ಯ ಬಸವಣ್ಣನವರ ದರ್ಶನಮಾಡುತ್ತ ಅವರ ಮಹಿಮೆಯನ್ನು ಕೇಳುತ್ತ ಕೊನೆಗೆ ಬಸವಧ್ಯಾನದಿಂದ ಬಿಡುಗಡೆಹೊಂದಿ ವೀರಶೈವ ಮತದೀಕ್ಷೆಯನ್ನು ಹೊಂದಬೇಕೆಂದಪೇಕ್ಷಿಸಿ ಆಗ ಆ ಕಲ್ಯಾಣದಲ್ಲಿ ಬಸವಣ್ಣನವರಿಲ್ಲದಿದ್ದುದನ್ನು ತಿಳಿದು ಚಿಂತಿಸುತ್ತಿರಲು ಈ ಸಿಂಗಿರಾಜನ ಸ್ವಪ್ನದಲ್ಲಿ ಕಲ್ಯಾಣದ ದೇವಿದೇವಯ್ಯನಿಂದ ದೀಕ್ಷೆಯನ್ನು ಹೊಂದೆಂಬುದಾಗಿ ಬಸವಣ್ಣನವರು ಅಪ್ಪಣೆಮಾಡಿದ ಪ್ರಕಾರ ಆ ದೇಪುದೇವಯ್ಯನವರಿಂದ ವೀರಶೈವ ದೀಕ್ಷೆಯನ್ನು ಹೊಂದಿ ಬಸವಣ್ಣನವರ ೭೪ ಪವಾಡಗಳುಳ್ಳ ಪುರಾಣವನ್ನು ಬರೆದನೆಂತಲೂ, ಈತನು ವೀರಶೈವ ಮಹಾಶರಣನಾದುದರಿಂದ ಪಾಲ್ಕುರಿಕೆ ಸೋಮನಾರಾಧ್ಯರು ತಾವು ರಚಿಸಿರುವ ಗಣಸಹಸ್ರನಾಮ ಎಂಬ ಗ್ರಂಥದಲ್ಲಿ ಈ ಸಿಂಗಿರಾಜನನ್ನು ದಶಗಣಂಗಳಲ್ಲಿ ಸೇರಿಸಿದ್ದಾರೆಂತಲೂ, ಮೈಸೂರಿನ ಶ್ರೀಯುತ ವಿದ್ವಾನ್ ಎಂ. ಬಸವಲಿಂಗಶಾಸ್ತ್ರಿಗಳವರು ಈ ಸಿಂಗಿರಾಜ ಪುರಾಣಕ್ಕೆ ಬರೆದ ಪೀಠಿಕೆಯಲ್ಲಿ ಹೇಳಿದ್ದಾರೆ.

ಶ್ರೀ ಪಾಲ್ಕುರಿಕೆ ಸೋಮನಾರಾಧ್ಯರು ಕ್ರಿ. ಶ. ೧೧೯೫ ರಲ್ಲಿದ್ದ ರೆಂದು ಶ್ರೀಯುತ ಆರ್. ನರಸಿಂಹಾಚಾರ್ಯರವರೇ ಹೇಳಿರುವುದರಿಂದ ಸಿಂಗಿ ರಾಜನು ಆ ಪೂರ್ವದಲ್ಲಿದ್ದನೆಂದು ಸಿದ್ಧವಾಗುತ್ತದೆ. ಆದಕಾರಣ ಸಿಂಗಿ ರಾಜ ಪುರಾಣವು ಶ್ರೀ ಸೋಮನಾರಾಧ್ಯರು ತೆಲುಗಿನಲ್ಲಿ ಬರೆದಿರುವ ಬಸವ ಪುರಾಣಕ್ಕಿಂತಲೂ ಮುಂಚಿನದೆಂದು ಧಾರಾಳವಾಗಿ ಹೇಳಬಹುದು. ಆದುದ ರಿಂದಲೇ ಈ ಪುರಾಣದಲ್ಲಿ ಬಸವಣ್ಣನವರು ೯ ನೆಯ ತಿಂಗಳಲ್ಲಿಯೇ ಜನಿಸಿ ದರೆಂದು, ಇವರ ಗುರುಜಾತವೇದಿ ಮುನಿಗಳೆಂದು, ಬಸವನು ಉಪನಯನವ ನ್ನು ತಿರಸ್ಕರಿಸಿದನಂತರ ಗುರುಗಳ ಬಳಿಗೆ ಹೋಗಿ ಕೆಲವುಕಾಲವಿದ್ದ ಬ ಳಿಕ ಬಲದೇವ ಮಂತ್ರಿಯು ತನ್ನ ಮಗಳನ್ನು ಕೊಟ್ಟು ವಿವಾಹಮಾಡಿದನೆಂ ದು, ಬಸವಣ್ಣನವರ ವಿರೋಧಿಗಳಲ್ಲಿ ಅನೇಕರ ಹೆಸರುಗಳನ್ನು ಹೇಳಿ ಈತ ನಿಗೆ ೩೬ ಜನ ಪ್ರತಿಸ್ಪರ್ಧಿಗಳಿದ್ದರೆಂದು, ಮತ್ತು ಬಸವಣ್ಣನವರಿಗೆ ಬಾಲ ಸಂಗಯ್ಯನೆಂಬ ಮಗನಿದ್ದನೆಂದು ಈ ಮೊದಲಾದ ಐತಿಹಾಸಿಕದೃಷ್ಟಿಯಿಂದ ನೋಡುವವರಿಗೆ ನಂಬಲಾರ್ಹವಾದ ಅನೇಕ ಸಂಗತಿಗಳನ್ನು ವಿವರಿಸಲು ಸಿಂಗಿರಾಜನಿಗೆ ಸಾಧ್ಯವಾಗಿದೆ. ಈ ವಿಷಯುಗಳು ಸೋಮನಾರಾಧ್ಯರ ಬಸ ವಪುರಾಣದಲ್ಲಿಲ್ಲ.

ಈ ಮಹಾನುಭಾವರ ವಿಷಯವನ್ನು ಈ ಪ್ರಕಾರ ಐತಿಹಾಸಿಕ ರೀತಿ ಯಲ್ಲಿ ಬರೆದುದರಿಂದ ಈ ಅವತಾರಿ ಪುರುಷರನ್ನು ಕಡಿಮೆಯಾಗಿ ತಿಳಿದನೆಂ ದು ಇವರ ವಿಷಯದಲ್ಲಿ ಕೇವಲ ಧಾರ್ಮಿಕ ಭಾವನೆಯಿಂದ ಅಧಿಕವಾದ ಭಕ್ತಿ ವಿಶ್ವಾಸಗಳನ್ನು ಹೊಂದಿರುವ ಅಸಂಖ್ಯಜನರು ಆಕ್ಷೇಪಿಸುವಂತೆಯೇ ಈ ಪರಮಪೂಜ್ಯರ ವಿಷಯದಲ್ಲಿ ಕೇವಲ ತಿರಸ್ಕಾರ ಬುದ್ಧಿಯುಳ್ಳ ಕೆಲವರು ಶ್ರೀ ಬಸವಣ್ಣನವರನ್ನು ಬಹು ಶ್ರೇಷ್ಠಪುರುಷರನ್ನಾಗಿ ಭಾವಿಸಿದೆನೆಂದು ಆ ಕ್ಷೇಪಿಸುವ ಸಂಭವವೂ ಇದೆ. ಏಕೆಂದರೆ, ಈ ಮಹಾತ್ಮರ ವಿಷಯದಲ್ಲಿ ಭೂಮ್ಯಾಕಾಶಗಳಷ್ಟು ಅಂತರದ ಅಭಿಪ್ರಾಯಗಳುಳ್ಳವರು ಅನೇಕರಿದ್ದಾ ರೆ. ನಾನು ಇವುಗಳಲ್ಲಿ ಯಾವ ಪಕ್ಷವನ್ನೂ ವಹಿಸಿ ಈ ಪುಸ್ತಕವನ್ನು ಬರೆ

ಯಲುಪಕ್ರಮಿಸದೆ ವೀರಶೈವ ಮತತತ್ವಗಳ ಮೇಲಿಂದಲೂ, ಮಹಾನುಭಾವರಾದ ಬಸವಣ್ಣನವರ ನಡೆನುಡಿಗಳ ಮೇಲಿಂದಲೂ, ನನ್ನ ಅಲ್ಪ ಮತಿಗೆ ಸರಿದೋರಿದ ಸಂಗತಿಗಳನ್ನೇ ಕ್ರೋಢೀಕರಿಸಿ ಗುಣ ದೋಷವಿಮರ್ಶನೆಯ ಐತಿಹಾಸಿಕರೀತಿಯಲ್ಲಿ ಈ ಪುಸ್ತಕವನ್ನು ಬರೆದಿರುವುದರಿಂದ ಪ್ರಾಚೀನ ಪುರುಷರ ಸಂಗತಿಗಳನ್ನು ಕೇವಲ ಐತಿಹಾಸಿಕ ದೃಷ್ಟಿಯಿಂದ ತಿಳಿದುಕೊಳ್ಳುವ ಜಿಜ್ಞಾಸುಗಳಿಗೆ ಅತ್ಯಲ್ಪವಾದರೂ ಸಮಾಧಾನವಾಗಬಹುದೆಂದು ನಂಬಿದ್ದೇನೆ.

ಈ ಮಹಾನುಭಾವರು ಕೇವಲ ನಮ್ಮ ವೀರಶೈವ ಮತವನ್ನುದ್ಧಾರ ಮಾಡಿದ ಪರಮ ಪೂಜ್ಯರೆಂದೇ ಅಲ್ಲ, ಈ ನಮ್ಮ ಕರ್ನಾಟಕದ ಮಹಾ ವಿಭೂತಿಗಳೆಂದು ಮತ್ತು ನಮ್ಮ ಭಾರತೀಯ ಸಂಸ್ಕೃತಿಯನ್ನು ಯಾವ ಸತ್ಯಾಗ್ರಹ ಮಾರ್ಗದಿಂದಾಚರಿಸಿ ಜೀರ್ಣೋದ್ಧಾರ ಮಾಡಿರುವುದರಿಂದ ಮಹಾತ್ಮಗಾಂಧಿಯವರು ಈಗ ಲೋಕಪೂಜ್ಯರಾಗಿದ್ದಾರೆಯೋ ಆ ಶ್ರೇಷ್ಠತರವಾದ ಸತ್ಯಾಗ್ರಹ ಪದ್ಧತಿಯನ್ನೇ ಅನುಸರಿಸಿದ ಪರಮ ಸತ್ಯಾಗ್ರಹಿಗಳೆಂದು ಕೂಡ ನಾನು ಭಾವಿಸಿದ್ದೇನೆ. ಈ ನನ್ನ ಭಾವನೆಯ ಸತ್ಯಾಸತ್ಯತೆಗಳ ನಿರ್ಣಯವನ್ನು ನಿಷ್ಪಕ್ಷಪಾತಿಗಳಾದ ವಾಚಕಮಹಾಶಯರೇ ಮಾಡುವರು.

ಶ್ರೀ ಬಸವಣ್ಣನವರು ಮಂತ್ರಿಗಳಾದವರೆಗಿನ ಸಂಗತಿಗಳನ್ನು ಮೊದಲನೆಯ ಮೂರು ಪ್ರಕರಣಗಳಲ್ಲಿಯೂ ಅನಂತರ ವೀರಶೈವ ಮತತತ್ವಗಳನ್ನು ಮತ್ತು ಆಚಾರಗಳನ್ನು ಬಹುಸಂಕ್ಷಿಪ್ತವಾಗಿ ನಾಲ್ಕನೆಯ ಪ್ರಕರಣದಲ್ಲಿಯೂ, ಆ ಮೇಲೆ ಬಸವಣ್ಣನವರು ಮಾಡಿದ ಮತಪ್ರಸಾರ ಮತ್ತು ಪ್ರಯಾಣಗಳನ್ನು ೫-೬ನೆಯ ಪ್ರಕರಣಗಳಲ್ಲಿಯೂ ವಿವರಿಸಿ ಉಪಸಂಹಾರದಲ್ಲಿ ಈ ಮಹಾನುಭಾವರ ವಿಷಯದಲ್ಲಿರಬಹುದಾದ ಆಕ್ಷೇಪಗಳನ್ನು ಮತ್ತು ಇವರಿಂದಾದ ರಾಷ್ಟ್ರೋದ್ಧಾರವನ್ನು ಕುರಿತು ಪ್ರಸ್ತಾಪಿಸಿರುವೆನು. ಆಬಳಿಕ ಈ ಮಹಾನುಭಾವರ ಅದ್ವಿತೀಯವಾದ ಬೋಧಪರ ಅನೇಕ ವಚನಗಳಲ್ಲಿ ೧೭೦ ವಚ

ನಗಳನ್ನು ಮತ್ತು ಇವರ ಕಾಲದಲ್ಲಿದ್ದ ಮಹಾಜ್ಞಾನಿಗಳಲ್ಲಿ ೨೦ ಶಿವಶರಣರ ೫ ಶಿವಶರಣೆಯರ ಒಟ್ಟು ೬೩ ವಚನಗಳನ್ನು ಉದಾಹರಿಸಿದ ತರುವಾಯ ಈ ವಚನಗಳಲ್ಲಿ ಪ್ರಯೋಗಿಸಲ್ಪಟ್ಟಿರುವ ಈ ಕಾಲದಲ್ಲಿ ಕಠಿಣವಾಗಿ ತೋರಬಹುದಾದ ಕೆಲವು ಶಬ್ದಗಳಿಗೆ ಅರ್ಥವನ್ನು ಕೊನೆಯಭಾಗದಲ್ಲಿ ಬರೆದಿರುವೆನು.

ಈ ಮಹಾನುಭಾವರಿಗೆ ಆ ಕಾಲದಲ್ಲಿ "ಬಸವಣ್ಣ" ಎಂಬುದಾಗಿಯೇ ಹೇಳುತ್ತಿದ್ದರೆಂದು ಆಗಿನ ಶಿವಶರಣರ ವಚನಗಳಿಂದ ಗೊತ್ತಾಗುವ ಪ್ರಯುಕ್ತ ಈ ಪುಸ್ತಕದಲ್ಲಿ ಇದೇ ಪ್ರಕಾರ ಹೇಳಲ್ಪಟ್ಟಿದೆ. ಈ ನೂತನ ಪ್ರಯತ್ನಕ್ಕೆ ಅತ್ಯಂತ ಸಹಾಯವಾಗಿರುವ ಈ ಕೆಳಗಿನ ಗ್ರಂಥಗಳ ಕರ್ತೃಗಳಿಗೂ, ಪ್ರಕಾಶಕರಿಗೂ, ಈ ಸಂಬಂಧವಾಗಿ ರಾಣೆಬೆನ್ನೂರು, ದಾವಣಗೆರೆ, ಗದಗ, ವಿಜಾಪುರಗಳಲ್ಲಿ ಉಪನ್ಯಾಸ ಮಾಡಿದನಂತರ ಸಲಹೆಗಳನ್ನು ಕೊಟ್ಟ ಅನೇಕ ಮಿತ್ರರಿಗೂ ಕೃತಜ್ಞತಾಪೂರ್ವಕ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಕರ್ನಾಟಕದ ಪ್ರಸಿದ್ಧಗ್ರಂಥಕಾರರೂ, ಇತಿಹಾಸಜ್ಞರೂ ಆದ ಶ್ರೀಯುತ ವೆಂಕಟೇಶ ಭೀಮರಾವ ಆಲೂರು ಬಿ. ಎ. ಎಲ್. ಎಲ್. ಬಿ. ಇವರು ನನ್ನ ಪ್ರಾರ್ಥನೆಯನ್ನು ಮನ್ನಿಸಿ ಈ ಪುಸ್ತಕಕ್ಕೆ ಅತ್ಯಂತ ಮಹತ್ವವಾದ ಮುನ್ನುಡಿಯನ್ನು ಬರೆದುದಕ್ಕೋಸ್ಕರ ನಾನು ಈ ಮಹಾಶಯರಿಗೆ ಅಭಿನಂದಿಸದೆ ಈ ಪೀಠಿಕೆಯನ್ನು ಮುಗಿಸಲಾರೆನು.

ವಾಚಕಮಹಾಶಯರು ತಮಗೆ ತೋರುವ ಇದರಲ್ಲಿನ ಗುಣದೋಷಗಳನ್ನು ದಯವಿಟ್ಟು ತಿಳುಹಿಸಿದರೆ ಅವುಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿ ಮುಂದಣ ಮುದ್ರಣದಲ್ಲಿ ಅವುಗಳ ಸಹಾಯದಿಂದ ಈ ಮಹಾನುಭಾವರ ಚರಿತ್ರೆಯು ಹೆಚ್ಚು ಫಲಕಾರಿಯಾಗುವಂತೆ ಪ್ರಯತ್ನಿಸುವೆನು.

ಮುಖ್ಯವಾಗಿ ಸಕಲರೂ ನಿಷ್ಪಕ್ಷಪಾತ ಬುದ್ಧಿಯಿಂದ ಈ ಮಹಾನು ಭಾವರ ನಿಜಸಂಗತಿಗಳನ್ನು ಶೋಧಿಸಿ ಅವುಗಳನ್ನು ಜನಾಂಗದ ಶ್ರೇಯಸ್ಸಿಗೆ ಕಾರಣವಾಗುವ ರೀತಿಯಲ್ಲಿ ರಾಷ್ಟ್ರದ ಮುಂದಿಡಲು ಈ ಪುಸ್ತಕವು ಅತ್ಯಲ್ಪವಾದರೂ ಸಹಾಯವಾಗಲೆಂದು ಹಾರೈಸುತ್ತೇನೆ.

ಹರಿಹರ.
ತಾ॥ ೨೫-೫-೨೪

ಹರ್ಡೀಕರ್ ಮಂಜಪ್ಪ
ಸತ್ಯಾಗ್ರಹಾಶ್ರಮ.



## ಮುಖ್ಯ ಸಹಾಯ ಗ್ರಂಥಗಳು.

(೧) ಸಿಂಗಿರಾಜಪುರಾಣ. (೨) ಕನ್ನಡ ಬಸವಪುರಾಣ. (೩) ಸಂಸ್ಕೃತ ಬಸವಪುರಾಣ. (೪) ಚೆನ್ನಬಸವಪುರಾಣ. (೫) ಶರಣ ಲೀಲಾಮೃತ. (೬) ಸಿದ್ಧಾಂತ ಶಿಖಾಮಣಿ. (೭) ವಚನ ಶಾಸ್ತ್ರಸಾರ. (೮) ಬಸವೇಶ್ವರರ ಪೂರ್ವದ ಮತ್ತು ಅನಂತರದ ವೀರಶೈವ ಸ್ಥಿತಿ (ಮರಾಠಿ) (೯) ಕರ್ನಾಟಕ ಗತವೈಭವ. (೧೦) ಕವಿಚರಿತೆ. (೧೧) ಬಸವಣ್ಣನವರ ವಚನಗಳು. (ಪ್ರಕಾಶಕರು ಬಳ್ಳಾರಿ ಕರ್ನಾಟಕ ಬುಕ್ ಡಿಪೊ.) (೧೨) ಪಾರಮೇಶ್ವರಾಗಮ. (೧೩) ಸೂಕ್ಷ್ಮಾಗಮ. (ಪ್ರಕಾಶಕರು–ಶ್ರೀ. ಕೈ. ಅಪ್ಪಾಸಾಹೇಬವಾರದ.

## ಸಂಕ್ಷಿಪ್ತ ಚಿಹ್ನೆಗಳ ವಿವರ.

ಪಾ. ಪಾರಮೇಶ್ವರಾಗಮ
ಸೂ. ಸೂಕ್ಷ್ಮಾಗಮ
ಸಿ. ಸಿದ್ಧಾಂತ ಶಿಖಾಮಣಿ
ಪ. ಪಟಲ



# ಕಠಿಣ ಶಬ್ದಗಳ ಅರ್ಥ.



ಅಂದಣ—ಪಲ್ಲಕ್ಕಿ
ಅಗ್ಗವಣಿ—ನೀರು
ಅಳುಪು—ಕೊಂದರೆ
ಆಪ್ಯಾಯನ—ತೃಪ್ತಿ
ಉಂಡಿಗೆ—ಗುರ್ತು
ಒಕ್ಕದ—ಬಿಟ್ಟವದ್ದನ್ನು
ಕಡೆಗೋಡಿ—ನೀರಿನ ಕಾಲಿವೆ
ಕರಿ—ಆನೆ
ಕರಿಕ—ಕಪ್ಪುಮನುಷ್ಯ
ಕೂಪ—ಪ್ರೀತಿಸುವವ
ಕೂರಲಗು—ತೀಕ್ಷ್ಣವಾದ ಶಸ್ತ್ರ
ಕೆಂಚ—ಕೆಂಪುಮನುಷ್ಯ
ಕೆಚ್ಚು—ಬಲವಾದ
ಕೆಮ್ಮನೆ—ನಿರರ್ಥಕವಾಗಿ
ಕೆಳೆ—ಸ್ನೇಹಿತ
ಕೊನರ್ವಾಗಿ—ಮೊಳಕೆ ಒಡೆದು
ಗಂಜಳ—ಹೊಲಸು
ಗಿಣಿಲು—ಗಿಂಡಿ
ಡಿಂಗರಿಗ—ಸೇವಕ
ತುಡುಗುಣಿ—ಕದ್ದು ತಿನ್ನು
ತೊರೆಯ—ನೀರನ್ನು
ದರದುರ—ಶಂಕೆ
ದಿಬ್ಯ—ದಿವ್ಯ
ನಿಚ್ಚಕ್ಕೆ—ನಿತ್ಯ
ಬಂಡ—ಹೂವಿನಲ್ಲಿರುವ ಮಕರಂದ
ಬಟ್ಟೆದಪ್ಪಿದ—ದಾರಿತಪ್ಪಿದ

ಬಲುಹಾಗು—ಶಕ್ತಿಯುಳ್ಳದ್ದಾಗು
ಬಳ್ಳ—ಅಳೆಯುವ ಸೇರು
ಬಿನ್ನಾಣ—ಜಾಣತನ
ಬೋನ—ಅನ್ನ
ಭಾಂಡಭಾಜನ—ದೇಹ
ಮಂಡೆಯ—ತಲೆಯ
ಮಡಗು—ಇಡು
ಮಡಲಲ್ಲಿ—ಉಡಿಯಲ್ಲಿ
ಮರೀಚಿ—ಕಿರಣ
ಮಸೆದಲಗು—ಹದನಾದ ಶಸ್ತ್ರ
ಮಾಬುದೆ—ಬಿಡುವುದೆ ?
ಮಿಂದರೆ—ಸ್ನಾನಮಾಡಿದರೆ
ಲೋಗರು—ಜನರು
ಸೊಗದ—ಸುಖದ
ಸೊಡರು—ದೀಪ
ಸೊಣಗ—ನಾಯಿ
ಹಡಿಕಿಗೆ—ಹೊಲಸಿಗೆ
ಹದುಳ—ಕ್ಷೇಮ
ಹದುಳಿಗ—ಸುಖವುಳ್ಳವ
ಹಾರೆನು—ಇಚ್ಛಿಸೆನು.
ಹೂಸಿ—ಹಚ್ಚಿ
ಹೇಳಿಗೆ—ಹಾವಿನ ಬುಟ್ಟಿ
ಹೊರೆಯಲ್ಲಿ—ನೆರೆಯಲ್ಲಿ
ಹೊಲಬಿಗ—ಜ್ಞಾನಿ
ಹೊಲಬು ಗೆಟ್ಟ—ರೀತಿತಪ್ಪಿದ
ಹೊಲ್ಲ—ಅಯೋಗ್ಯ.

# ಮುಖ್ಯ ಶುದ್ಧಾಶುದ್ಧ



| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| ೧೨೩ | ೨ | ಕುವಳ | ಕಳುವ |
| ೧೦೪ | ೬ | ಅದಕದೆ | ಅಡಕದೆ |
| ೧೨೬ | ೩ | ಮೆಜ್ಜೆ | ಮುಜ್ಜೆ |
| ೧೨೬ | ೬ | ಕೆಳ | ಕೆಳೆ |

೧೨೮ ನೆಯ ಪುಟದ (೫೪) ನೆಯ ವಚನದ ಮುಂದಣ ಭಾಗವು "ಶರಣರೊಷನೆ ಮರೆದು ಸರಸವಾಡಿದರೆ ಸುಣ್ಣದ ಕಲ್ಲು ಮಡಲಲ್ಲಿ ಕಟ್ಟಿಕೊಂಡು ಮಡುವಿನಲ್ಲಿ ಬಿದ್ದಂತೆ."

| | | | |
|---|---|---|---|
| ೧೩೯ | ೪ | ಆರೆಮಾಡಿ | ಆಶೆಮಾಡಿ |
| ೧೩೯ | ೬ | ಕಾಡಕೊಪ್ಪು | ಕಾಡಸೊಪ್ಪು |
| ೧೪೩ | ೬ | ವಚನಜೀವ | ವಚನಬೀವ |
| ೧೪೫ | ೨೧ | ಲಿಂಗಂ | ಲಿಂಗ |
| ೧೪೫ | ೨೨ | ನಿಮಿಷಾಥ | ನಿಮಿಷಾರ್ಥ |
| ೧೫೨ | ೧ | ನಡ್ತೆ | ನಡೆಯು |



# ಉಪ ಪೀಠಿಕೆ.

ಈ ಪುಸ್ತಕದಲ್ಲಿ ಪ್ರಕಟವಾಗಿರುವ ಮಹಾನುಭಾವರಾದ ಶ್ರೀಬಸವಣ್ಣನವರ ಭಾವಚಿತ್ರವು ಸಿಂಗಿರಾಜ ಪುರಾಣದ ೭ನೆಯ ಸಂಧಿಯ ೧೯-೨೦ ನೆಯ ಪದ್ಯಗಳಲ್ಲಿ ವಿವರಿಸಿದ ಸಂಗತಿಗಳ ಮೇಲಿಂದ ಸಿದ್ಧಗೊಳಿಸಲ್ಪಟ್ಟಿದೆ.

ಈ ಚಿತ್ರವನ್ನು ಬೊಂಬಾಯಿ ಚಿತ್ರಕಲಾ ಮಹಾ ವಿದ್ಯಾಲಯದ ವಿದ್ಯಾರ್ಥಿಗಳಾಗಿರುವ ಮಿಣಿಜಿಗಿ ಮಡಿವಾಳಪ್ಪನವರು ಬರೆದುಕೊಟ್ಟಿದಕ್ಕೋಸ್ಕರ ಈ ನನ್ನ ಪ್ರಿಯಮಿತ್ರರಿಗು ಮತ್ತು ಈ ಕಾರ್ಯಕ್ಕೆ ಮುಖ್ಯ ಕಾರಣರಾದ ಶ್ರೀಯುತ ಗಂಗಾಧರಪ್ಪ ಅಣ್ಣಾಸಾಬೋಜಿ ಈ ಮಹಾಶಯರಿಗು ನಾನು ತುಂಬಾ ಕೃತಜ್ಞನಾಗಿದ್ದೇನೆ.

ಹರಿಹರ,
ತಾ|| ೨೮—೮—೧೯೨೪.

ಹರ್ಡೇಕರ್ ಮಂಜಪ್ಪ,
ಸತ್ಯಾಗ್ರಹಾಶ್ರಮ.



ಮಹಾನುಭಾವರಾದ ಶ್ರೀ ಬಸವಣ್ಣನವರು
ಶ್ರೀ ಬಿಜ್ಜಳರಾಜನ ಸಭೆಯಲ್ಲಿ ಬಿದ್ದ ಲಿಪಿಯನ್ನು ಓದಲು ಬಂದಿದ್ದಾರೆ.

ಶ್ರೀ.

# ಬಸವಚರಿತ್ರೆ.



## ೧ ನೆಯ ಪ್ರಕರಣ.

## ಶ್ರೀ ಬಸವಣ್ಣನವರ ಹಿಂದಣ ಕರ್ನಾಟಕ ಮತ್ತು ವೀರಶೈವಮತ.

ಮಹಾನುಭಾವರಾದ ಶ್ರೀ ಬಸವಣ್ಣನವರು ಅವತರಿಸುವುದಕ್ಕಿಂತ ಪೂರ್ವದಲ್ಲಿ ಕರ್ನಾಟಕವು ಮತ್ತು ವೀರಶೈವಮತವು ಹೇಗಿದ್ದವೆಂಬುದನ್ನು ಸ್ವಲ್ಪವಾದರೂ ಮೊದಲು ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಈ ಸಂಗತಿಗಳು ಗೊತ್ತಿರದಿದ್ದರೆ ಈ ಮಹಾನುಭಾವರ ಅವತಾರಕೃತ್ಯದ ಮಹತ್ವವು ಅಷ್ಟು ಚೆನ್ನಾಗಿ ವೇದ್ಯವಾಗಲಾರದು. ಏಕೆಂದರೆ ಬಸವಣ್ಣನವರ ಜೀವಿತವು ವೀರಶೈವ ಮತೋದ್ಧಾರಕ್ಕೋಸ್ಕರ ಈ ಕರ್ನಾಟಕದಲ್ಲಿಯೇ ವಿನಿಯೋಗಿಸಲ್ಪಟ್ಟಿತು. ಆದಕಾರಣ ಬಸವಣ್ಣನವರ ಚರಿತ್ರೆಗೆ ಕರ್ನಾಟಕ ಮತ್ತು ವೀರಶೈವಮತ ಇವು ಅತ್ಯಂತ ಸಂಬಂಧವುಳ್ಳವುಗಳಾಗಿವೆ. ಇಷ್ಟೇ ಅಲ್ಲ; ಈ ವಿಷಯಗಳನ್ನು ತೆಗೆದುಹಾಕಿದರೆ ಬಸವಣ್ಣನವರ ಚರಿತ್ರೆಯೇ ಇಲ್ಲದಂತಾಗುವುದೆಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಆದುದರಿಂದ ಬಸವಣ್ಣನವರ ಚರಿತ್ರೆಗೆ ಇಷ್ಟು ನಿಕಟಸಂಬಂಧವುಳ್ಳ ಈ ಉಭಯ ವಿಷಯಗಳ ಕಡೆಗೆ ಮೊದಲು ಸ್ವಲ್ಪ ಗಮನಿಸೋಣ.

ಬಸವಣ್ಣನವರು ಸಾರ್ವಭೌಮ ಎರಡನೆಯ ಪುಲಿಕೇಶಿಯಂತೆ ಅಥವಾ ಛತ್ರಪತಿ ಶಿವಾಜಿ ಮಹಾರಾಜನಂತೆ ಮಹಾ ಪರಾಕ್ರಮದಿಂದ

"ಜನರು ರಾತ್ರಿಯಲ್ಲಿ ತಮ್ಮ ಮನೆಯ ಬಾಗಿಲುಗಳನ್ನು ಕೂಡಾ ಮುಚ್ಚುತ್ತಿರಲಿಲ್ಲ. ಏಕೆಂದರೆ, ಅವರಿಗೆ ಕಳ್ಳರಭಯವೇ ಇರಲಿಲ್ಲ. ಕಳ್ಳರಿಗೆ ಪ್ರತಿಯಾಗಿ ಚಂದ್ರನ ಕಿರಣಗಳೇ ಅವರ ಮನೆಯಲ್ಲಿ ಪ್ರವೇಶಿಸುತಲಿದ್ದವು." ಇದರಮೇಲಿಂದ ಆಗ ಕರ್ನಾಟಕರಾಷ್ಟ್ರದಲ್ಲಿ ಎಂತಹ ಅಪೂರ್ವವಾದ ಶಾಂತಿ ಸಮಾಧಾನಗಳು ನೆಲೆಸಿದ್ದವೆಂಬುದು ವ್ಯಕ್ತವಾಗುತ್ತದೆ. ವಿಜ್ಞಾನೇಶ್ವರನು "ಮಿತಾಕ್ಷರಾ" ಎಂಬ ಧರ್ಮಶಾಸ್ತ್ರಗ್ರಂಥದ ಕೊನೆಯಲ್ಲಿ ವಿಕ್ರಮಾದಿತ್ಯನ ವಿಷಯವಾಗಿ ಹೇಳಿರುವುದೇನೆಂದರೆ:—

ನೋದೃಷ್ಟಃಶ್ರುತಏವವಾಕ್ಷಿತಿಪತಿಃ ಶ್ರೀವಿಕ್ರಮಾರ್ಕೋಪಮಃ ।

"ವಿಕ್ರಮಭೂಪಾಲನಂತಹ ರಾಜನಿದ್ದುದನ್ನು ನೋಡಿಯೂ ಇಲ್ಲ; ಕೇಳಿಯೂ ಇಲ್ಲ." ಇದು ಕೇವಲ ಔಪಚಾರಿಕವಾದ ಸ್ತುತಿಯಾಗಿರದೆ ನಿಜಾಂಶವನ್ನೆ ವ್ಯಕ್ತಪಡಿಸತಕ್ಕದ್ದಾಗಿದೆಯೆಂದು ಡಾ. ಆರ್. ಜಿ. ಭಾಂಡಾರಕರ್ ರವರು ಹೇಳಿದ್ದಾರೆ.

ಈ ತ್ರಿಭುವನ ಮಲ್ಲಭೂಪಾಲನಂತೆಯೇ ಆತನ ಮಗನಾದ ಮೂರನೆಯ ಸೋಮೇಶ್ವರನು (ಭೂಲೋಕಮಲ್ಲ) ಕೂಡಾ ಪ್ರಜಾಹಿತತತ್ಪರನಾಗಿಯೇ ಕ್ರಿ. ಶ. ೧೧೩೮ರ ವರೆಗೆ ಪ್ರಭುತ್ವವನ್ನು ಮಾಡಿದನು. ಈತನು ಮಹಾವಿದ್ವಾಂಸನೂ, ಗ್ರಂಥಕಾರನೂ ಆಗಿದ್ದನು. ಮಾನಸೋಲ್ಲಾಸ (ಅಭಿಲಷಿತಾರ್ಥಚಿಂತಾಮಣಿ) ಎಂಬ ರಾಜಕೀಯ ವಿಷಯದ ಒಂದು ಶ್ರೇಷ್ಠತರವಾದ ಗ್ರಂಥವನ್ನು ಈತನು ಸಂಸ್ಕೃತಭಾಷೆಯಲ್ಲಿ ರಚಿಸಿದನು. ಈತನಿಗೆ "ಸರ್ವಜ್ಞಭೂಪ" ಎಂಬ ಬಿರುದಿದ್ದಿತು. ಪ್ರಜಾಕ್ಷೇಮಚಿಂತಕರಾದ ಈ ಉಭಯ ಮಹಾರಾಜರ ಆಳ್ವಿಕೆಯಿಂದ ಕರ್ನಾಟಕವು ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಸ್ಥಿರವಾದ ಶಾಂತತೆಯನ್ನು ಹೊಂದಿದ್ದಿತೆಂದು ಸ್ಪಷ್ಟವಾಗುತ್ತದೆ. ಈಪ್ರಕಾರ ದೇಶದಲ್ಲಿ ಶಾಂತತೆಯು ನೆಲೆಸಿದ್ದುದು ಶ್ರೀ ಬಸವಣ್ಣನವರ ಅವತಾರಕೃತ್ಯಕ್ಕೆ ಬಹುಸಹಾಯವಾಯಿತು. ರಾಷ್ಟ್ರದಲ್ಲಿ ರಾಜಕೀಯ ಸುಖಶಾಂತಿಗಳಿರದಿದ್ದರೆ

ಆ ರಾಷ್ಟ್ರದಲ್ಲಿಯ ಜನಗಳ ಬೌದ್ಧಿಕ, ಮಾನಸಿಕ, ಮತ್ತು ಆತ್ಮೀಯ ಉನ್ನತಿಗಳಿಗೆ ಅವಕಾಶವಿಲ್ಲದಂತಾಗಿ ಆ ಸಂಬಂಧವಾದ ನಾನಾ ಮಾರ್ಗಗಳು ಲೋಪವಾಗಿ ಹೋಗುತ್ತವೆ. ಏಕೆಂದರೆ, ರಾಷ್ಟ್ರದ ಮಹಾ ಮಹಾ ವ್ಯಕ್ತಿಗಳೆಲ್ಲಾ ರಾಜಕೀಯ ಅಶಾಂತತೆಯನ್ನು ನಿವಾರಣೆ ಮಾಡುವುದರಲ್ಲಿಯೇ ಆಸಕ್ತರಾಗುತ್ತಾರೆ. ಶ್ರೀ ಬಸವಣ್ಣನವರ ಕಾಲದಲ್ಲಾದರೋ ಇಂತಹ ರಾಜಕೀಯ ಅಸಂತೋಷವಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಒಬ್ಬ ಮನುಷ್ಯನ ದೇಹಸ್ಥಿತಿಯು ಉತ್ತಮವಾಗಿದ್ದು ಆತನ ಆತ್ಮೋನ್ನತಿಯು ಮಾತ್ರ ಆಗದೆ ಇದ್ದಪಕ್ಷದಲ್ಲಿ ಆ ಮನುಷ್ಯನು ಸುಸ್ಥಿತಿಯಲ್ಲಿದ್ದಾನೆಂದು ಹೇಗೆ ಹೇಳಲಿಕ್ಕಾಗುವುದಿಲ್ಲವೋ ಹಾಗೆಯೇ ಒಂದು ದೇಶದ ರಾಜಕೀಯಸ್ಥಿತಿಯು ಚೆನ್ನಾಗಿದ್ದಮಾತ್ರದಿಂದಲೇ ಆ ದೇಶವು ಸುಸ್ಥಿತಿಯಲ್ಲಿದೆಯೆಂದು ಭಾವಿಸುವುದಕ್ಕಾಗುವುದಿಲ್ಲ. ಆ ದೇಶದ ಧಾರ್ಮಿಕಸ್ಥಿತಿಯನ್ನೂ ನೋಡಬೇಕಾಗುತ್ತದೆ. ಏಕೆಂದರೆ, ರಾಜಕೀಯ ವಿಷಯವು ರಾಷ್ಟ್ರಪುರುಷನ ಶಾರೀರಕ ಅಭಿವೃದ್ಧಿಗೇನೇ ಹೆಚ್ಚುಸಂಬಂಧವಿರುವಂತೆ ಧಾರ್ಮಿಕವಿಷಯವು ಆ ರಾಷ್ಟ್ರಪುರುಷನ ಆತ್ಮೋನ್ನತಿಗೇನೇ ವಿಶೇಷಸಂಬಂಧಿಸಿದೆ. ಆದಕಾರಣ ಜನಗಳ ಆತ್ಮೋನ್ನತಿಗೇನೇ ಧರ್ಮದ ಆವಶ್ಯಕತೆಯು ವಿಶೇಷವಾಗಿ ಉಂಟು. ಯಾವಮತದಿಂದ ಜನಗಳ ಆತ್ಮೋನ್ನತಿಯ ಅನೇಕ ಮಾರ್ಗಗಳು ಪ್ರತಿಬಂಧಿಸಲ್ಪಟ್ಟು ವ್ಯಕ್ತಿಯ ಆಚಾರ ಮತ್ತು ವಿಚಾರ ಸ್ವಾತಂತ್ರ್ಯಗಳಿಗೆ ಅವಕಾಶವಿಲ್ಲದಂತಾಗಿರುತ್ತದೆಯೋ ಅಂತಹ ಮತವು ಅಥವಾ ಮತಗಳು ಒಂದು ರಾಷ್ಟ್ರದಲ್ಲಿ ಪ್ರಬಲವಾಗಿದ್ದರೆ ಆ ರಾಷ್ಟ್ರದ ಧಾರ್ಮಿಕಸ್ಥಿತಿಯು ಚೆನ್ನಾಗಿಲ್ಲವೆಂದೇ ತಿಳಿಯಬೇಕು. ಈ ದೃಷ್ಟಿಯಿಂದ ನೋಡಿದರೆ ಬಸವಣ್ಣನವರ ಪೂರ್ವದಲ್ಲಿ ಕರ್ನಾಟಕದ ಧಾರ್ಮಿಕಸ್ಥಿತಿಯು ಒಳ್ಳೆಯರೀತಿಯಲ್ಲಿರಲಿಲ್ಲವೆಂದೇ ತೋರುತ್ತದೆ.

ವಿಶ್ವಪ್ರೇಮ, ಸದಾಚಾರ, ಸಮಭಾವನೆ ಮೊದಲಾದ ಆತ್ಮೋನ್ನತಿಗೆ ಆವಶ್ಯಕವಾದ ತತ್ವಗಳೇ ಮೂಲವಾಗಿದ್ದ ಬೌದ್ಧಮತವನ್ನು ಆ ಭಗವಾನ್ ಬುದ್ಧದೇವನು ಉಚ್ಚಕುಲದವರೆಂದಾಗಲಿ, ಅಥವಾ ನೀಚಕುಲದವರೆಂದಾಗಲಿ, ಮತ್ತು ಸ್ತ್ರೀಯರೆಂದಾಗಲಿ, ಅಥವಾ ಪುರುಷರೆಂದಾಗಲಿ ಭಿನ್ನಭೇದಗಳನ್ನು ಮಾಡದೆ ಇಡೀ ಮನುಷ್ಯಜಾತಿಗೇನೇ ಬೋಧಿಸಿದ್ದನಷ್ಟೆ. ಆ ಉದಾರಮತವು ಈ ಕರ್ನಾಟಕದಲ್ಲಿ ಯಾವಕಾಲದಲ್ಲಿಯೂ ಅಷ್ಟು ವಿಶೇಷ ಪ್ರಸಾರವಾಗಿರಲಿಲ್ಲ. ಹನ್ನೆರಡನೆಯ ಶತಮಾನದ ಆದಿಭಾಗದಲ್ಲಂತೂ ಅದು ನಾಮಶೇಷವಾಗಿದ್ದಿತೆಂದು ಹೇಳಬಹುದು. ಅಹಿಂಸೆಯೇ ಪ್ರಾಧಾನ್ಯವಾಗಿದ್ದ ಜೈನಮತವು ಮಾತ್ರ ಈ ದೇಶದಲ್ಲಿ ಬಹುಕಾಲದಿಂದಲೂ ಪ್ರಬಲವಾಗಿಯೇ ಇದ್ದಿತು. ಶ್ರೀ. ಸಮಂತಭದ್ರ, ಅಕಳಂಕ, ಜಿನಸೇನಾಚಾರ್ಯ ಮೊದಲಾದ ಜೈನಮತದ ಮಹಾ ಮಹಾ ವಿದ್ವಾಂಸರ ಉಪದೇಶದಿಂದಲೂ, ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ ಈ ನಾಲ್ಕು ರಾಜವಂಶಗಳ ಅನೇಕ ರಾಜರುಗಳ ಪ್ರೋತ್ಸಾಹದಿಂದಲೂ ಜೈನಮತವು ಈ ದೇಶದಲ್ಲಿ ಬಹುಕಾಲ ಅಭಿವೃದ್ಧಿಸ್ಥಿತಿಯಲ್ಲಿಯೇ ಇದ್ದಿತು. ಆದರೆ ಶ್ರೀ ಶಂಕರಾಚಾರ್ಯ, ಶ್ರೀ ರಾಮಾನುಜಾಚಾರ್ಯರುಗಳ ಸ್ಮಾರ್ತ ಮತ್ತು ವೈಷ್ಣವ ಮತಗಳ ಪ್ರಸಾರದಿಂದ ಈ ಜೈನಮತವು ದಿನೇದಿನೇ ಕ್ಷೀಣಿಸುತ್ತ ಹನ್ನೆರಡನೆಯ ಶತಮಾನದ ಆದಿಯಲ್ಲಿ ಎಷ್ಟೋ ಕಡಿಮೆಯಾಗಿದ್ದಿತು. ಆದರೂ ಆ ಕಾಲದಲ್ಲಿ ಶೈವ, ವೈಷ್ಣವ ಮತ್ತು ಜೈನಮತಗಳು ಸಮಾನ ಬಲವುಳ್ಳವುಗಳಾಗಿಯೇ ಇದ್ದವೆಂದು ಹೇಳಬಹುದು.

ಈ ತ್ರಿಮತಗಳಲ್ಲಿ ವೈಷ್ಣವ ಮತೋದ್ಧಾರಕರಾದ ಶ್ರೀ ರಾಮಾನುಜಾಚಾರ್ಯರು ಮಾತ್ರ ಕುಲಕ್ಕಿಂತಲೂ ಗುಣಕ್ಕೇನೇ ಪ್ರಾಮುಖ್ಯತೆಯನ್ನು ಕೊಟ್ಟು ಸ್ವಲ್ಪಮಟ್ಟಿಗೆ ಆಚರಣೆಯಲ್ಲಿಯೂ ತಂದರು. ಕುಲದಲ್ಲಿ ಕಡಿಮೆಯವನಾಗಿದ್ದರೂ ಭಕ್ತಿಯಲ್ಲಿ ಮಿಗಿಲಾಗಿದ್ದ ಕಂಚೀಪೂರ್ಣನೆಂಬ ಸಾಧುಶಿರೋಮಣಿಯ ಸೇವೆಯನ್ನು ಮಾಡಲು ಈ ಆಚಾರ್ಯರು

ಹಿಂಜರಿಯಲಿಲ್ಲ. ಇಷ್ಟೇ ಅಲ್ಲ, ಆ ಮಹಾಭಗವದ್ಭಕ್ತನು ಕುಲದಲ್ಲಿ ಬ್ರಾಹ್ಮ ಣೇತರನಾಗಿದ್ದರೂ ಆತನ ಪ್ರಸಾದಸೇವನೆಯನ್ನು ಕೂಡಾ ಈ ಆಚಾರ್ಯರು ಇಚ್ಛಿಸಿ ತಮ್ಮಲ್ಲಿದ್ದ ಗುಣೈಕಪಕ್ಷಪಾತತೆಯನ್ನು ವ್ಯಕ್ತಗೊಳಿಸಿದರು. ಆದರೆ ಇವರ ಶಿಷ್ಯಪರಂಪರೆಗೆ ಸಂಬಂಧಪಟ್ಟ ಶ್ರೀರಾಮಾನಂದರು ಜಾತಿ ಯ ಕಟ್ಟನ್ನು ಸಂಪೂರ್ಣ ಬಿಚ್ಚಿಹಾಕಿ ಹರಿಭಕ್ತರಾದ ಸದ್ಗುಣ ಸದಾಚಾರ ಸಂಪನ್ನರನ್ನೆಲ್ಲಾ ಉತ್ತರ ಹಿಂದುಸ್ಥಾನದಲ್ಲಿ ಒಂದುಗುಂಪಿಗೆ ಹೇಗೆ ಸೇರಿಸಿ ದರೋ ಹಾಗೆ ಈ ಆಚಾರ್ಯರೇನೂ ಮಾಡಲಿಲ್ಲ. ಆದುದರಿಂದ ಹನ್ನೆರಡ ನೆಯ ಶತಮಾನದ ಆದಿಭಾಗದಲ್ಲಿ ಕರ್ನಾಟಕದಲ್ಲಿದ್ದ ಶೈವ, ವೈಷ್ಣವ ಮತ್ತು ಜೈನಮತೀಯರ ಮತಪ್ರಸಾರಣೆಯ ಕಾರ್ಯವು ಮುಖ್ಯವಾಗಿ ಉತ್ತ ಮವರ್ಣದವರಲ್ಲಿ ಜರುಗುತ್ತಿದ್ದಿತೇವಿನಾ ಸಾಮಾನ್ಯಕುಲದವರ ಕಡೆಗೆ ಹೋಗಿರಲಿಲ್ಲ. ಈ ತ್ರಿಮತದವರ ವಿಚಾರಕ್ರಾಂತಿಯು ಕೀಳುಕುಲದವ ರೆಂದು ಹೇಳಿಸಿಕೊಳ್ಳುತ್ತ ಹೀನಾವಸ್ಥೆಯಲ್ಲಿದ್ದ ಜನಗಳ ತಿಳುವಳಿಕೆಯನ್ನು ಹೆಚ್ಚಿಸಿ ಅವರ ಆತ್ಮೋನ್ನತಿಗೇನೂ ಸಹಾಯಮಾಡಲಿಲ್ಲ. ಇವರ ಮತಚ ರ್ಚೆಗಳೂ, ಉಪದೇಶಗಳೂ, ಸಂಸ್ಕೃತಭಾಷೆಯಲ್ಲಿಯೇ ಹೆಚ್ಚಾಗಿ ಜರುಗು ತ್ತಿದ್ದವಾದುದರಿಂದ ಜನಸಾಮಾನ್ಯರಲ್ಲಿ ವಿಚಾರಕ್ರಾಂತಿಯಾಗಲು ಅವಕಾ ಶವೇ ಇರಲಿಲ್ಲ. ಆದುದರಿಂದ ಸಾಮಾನ್ಯಜನ ಸಮೂಹಕ್ಕೂ, ಸ್ತ್ರೀವರ್ಗ ಕ್ಕೂ, ಆತ್ಮೋನ್ನತಿಗೆ ಆವಶ್ಯಕವಾಗಿದ್ದ ಅನೇಕ ಸ್ವಾತಂತ್ರ್ಯ ಸೌಲಭ್ಯ ಗಳು ಆ ಕಾಲದಲ್ಲಿರಲಿಲ್ಲ. ಗುಣಕರ್ಮಾನುಗುಣ್ಯವಾಗಿ ಏರ್ಪಟ್ಟಿದ್ದ ಪ್ರಾ ಚೀನವೈದಿಕಧರ್ಮದ ವರ್ಣಕಲ್ಪನೆಯು ಅಳಿದುಹೋಗಿ ಜನ್ಮವಿಶಿಷ್ಟವಾದ ವರ್ಣಕಲ್ಪನೆಯು ಆ ಕಾಲದಲ್ಲಿ ದೃಢತರವಾಗಿದ್ದಿತು. ಜೈನಮತವು ಕಳೆ ಗುಂದುತ್ತಾಬಂದುದರಿಂದ ಪಶುಯಜ್ಞವು ಮತ್ತ ತಲೆಯೆತ್ತಿದ್ದಿತು. ಅಂತು ಭಗವಾನ್ ಗೌತಮಬುದ್ಧನು ಅವತರಿಸುವ ಪೂರ್ವದಲ್ಲಿ ಭರತ ಖಂಡದ ಧಾರ್ಮಿಕಸ್ಥಿತಿಯು ಹೇಗಿದ್ದಿತೋ ಹಾಗೆಯೇ ಸ್ವಲ್ಪ ಹೆಚ್ಚುಕಡಿಮೆಯಾಗಿ ಶ್ರೀ ಬಸವಣ್ಣನವರು ಅವತರಿಸುವ ಪೂರ್ವ ದಲ್ಲಿ ಕರ್ನಾಟಕದ ಧಾರ್ಮಿಕಸ್ಥಿತಿಯಿದ್ದಿತೆಂದು ಹೇಳಬಹುದು.

ಇಂತಹ ಕಾಲದಲ್ಲಿ ಶ್ರೀಬಸವಣ್ಣನವರು ಅವತರಿಸಿ ಆ ಪ್ರಾಚೀನ ವೀರಶೈವಮತವನ್ನು ಪ್ರಸಾರಮಾಡಲುಪಕ್ರಮಿಸಿದರು. ಶ್ರೀ ಬಸವಣ್ಣನವರು ಆ ಕಾಲದಲ್ಲಿ ಹೊಸದಾಗಿಯೇ ಒಂದು ಮತವನ್ನೇರ್ಪಡಿಸಿದರೆಂದು ಅನೇಕರು ತಿಳಿದುಕೊಂಡಿರುವುದರಿಂದ ಆ ಮಹಾನುಭಾವರ ಪೂರ್ವದಲ್ಲಿಯೂ ಈ ಮತವು ಇದ್ದಿತೆಂಬ ವಿಷಯದಲ್ಲಿರುವ ಐತಿಹಾಸಿಕ ಆಧಾರಗಳಲ್ಲಿ ಕೆಲವುಗಳನ್ನು ಇಲ್ಲಿ ಉದಾಹರಿಸುವುದು ಆವಶ್ಯಕವಾಗಿದೆ. ಶ್ರೇಷ್ಠ ತತ್ವಗಳುಳ್ಳ ಈ ವೀರಶೈವಮತವನ್ನು ಬಸವಣ್ಣನವರೇ ಏರ್ಪಡಿಸಿದರೆಂದು ಹೇಳುವುದರಿಂದ ಬಸವಣ್ಣನವರಿಗೆ ಯಾವಕೊರತೆಯೂ ಉಂಟಾಗದೆ ಅವರ ಘನತೆಯನ್ನು ಹೆಚ್ಚಿಸಿದಂತೆಯೇ ಆಗುತ್ತದೆ. ಆದರೆ ಅದು ನಿಜವಾದ ಸಂಗತಿಯಲ್ಲ. ಆದಕಾರಣ ನಿಜಾಂಶವನ್ನು ವಿವರಿಸಬೇಕಾಗಿದೆ.

(೧) ಮಿ. ರೈಸ್ ಸಾಹೇಬರು "Mysore Inscription" ಎಂಬ ಪುಸ್ತಕದಲ್ಲಿ ಬೆಳ್ಳಿಗಾವಿಯ ಶಿಲಾಲಿಪಿಗಳ ವಿಷಯಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಎಂಟನೆಯ ಲಿಪಿಯಲ್ಲಿರುವುದೇನೆಂದರೆ:—"ಹಿರೇಮಠ, ಪಂಚಲಿಂಗನಮಠ, ತ್ರಿಪುರಾಂತಕನಮಠ, ವಾಮಶಕ್ತಿಮಠ, ಮತ್ತು ಕೋಡಿಯಮಠ ಎಂಬ ಐದುಮಠಗಳಲ್ಲಿ ಮೂಳಿಗ ಮಧುಕೇಶ್ವರ ಪಂಡಿತ, ಸರ್ವೇಶ್ವರ ಪಂಡಿತದೇವ, ಜ್ಞಾನಶಕ್ತಿದೇವ, ಮೊದಲಾದ ಮಠಾಧಿಕಾರಿಗಳಿದ್ದರು. ಈ ಪಟ್ಟಣದಲ್ಲಿ ಮಾಚಿಶೆಟ್ಟಿ, ಮಾಣಿಕಶೆಟ್ಟಿ, ಮಹಾದೇವಶೆಟ್ಟಿ, ಮೊದಲಾದ ವೀರಬಣಜಿಗರು ಪ್ರಮುಖರಾಗಿದ್ದರು." ಹತ್ತನೆಯ ಲಿಪಿಯಲ್ಲಿರುವುದೇನೆಂದರೆ:—"ಈ ಶೆಟ್ಟರು ನೇಪಾಳ, ಕುರುಂಬ, ಕಾಂಭೋಜ, ಗೊಲ್ಲ, ಲಾಳ ಮತ್ತು ಬರ್ಬರ್ ಮೊದಲಾದ ದೇಶಗಳಿಗೆ ಜಲಸ್ಥಳ ಮಾರ್ಗಗಳಿಂದ ವ್ಯಾಪಾರಕ್ಕೋಸ್ಕರ ಹೋಗುತ್ತಿದ್ದರು. ಇವರು ಲಿಂಗವನ್ನು ಮಸ್ತಕದಲ್ಲಿ ಧರಿಸುತ್ತಿದ್ದರು. ಮತ್ತು ಕೈಲಾಸನಿಶಾಶೆ, ಶ್ವೇತಛತ್ರಿಗಳನ್ನುಪಯೋಗಿಸುತ್ತಿದ್ದರು." ಈ ವೀರಬಣಜಿಗರು ವೀರಶೈವರಲ್ಲಿಯೇ ಒಂದು ವರ್ಗಕ್ಕೆ

ಸೇರಿದವರೆಂದು ಮಿ. ರೈಸ್ ಸಾಹೇಬರೇ ಹೇಳಿದ್ದಾರೆ. ಈ ಶಿಲಾಲಿಪಿಗಳು ಕ್ರಿ. ಶ. ೧೧೧೨ ನೆಯ ಇಸವಿಯಲ್ಲಿ ಬರೆಯಲ್ಪಟ್ಟಿವೆ.

(೨) ಮಿ॥ ಫ್ಲೀಟ್ ಸಾಹೇಬರು "Dynasties of Canarese Districts" ಎಂಬ ಗ್ರಂಥದ ೪೫ ನೆಯ ಪುಟದಲ್ಲಿ ಪೋಟಲ ಕೆರೆಯ ವಿಷಯವಾಗಿ ಬರೆದಿರುವುದೇನೆಂದರೆ:—"ಕ್ರಿ. ಶ. ೧೦೧೬ ರಿಂದ ೧೦೪೦ನೆಯ ಇಸವಿಯವರೆಗೆ ಆಳಿದ ಚಾಲುಕ್ಯವಂಶದ ಮೂರನೆಯ ರಾಜನಾದ ಜಯಸಿಂಹನು ದೇವರದಾಸಿಮಯ್ಯನಿಂದ ವೀರಶೈವಮತ ದೀಕ್ಷೆ ಯನ್ನು ಹೊಂದಿದನು."

(೩) ಕ್ರಿ. ಶ. ಒಂಬತ್ತನೆಯ ಶತಮಾನದಲ್ಲಿ ಕಂಚಿಪಟ್ಟಣದಲ್ಲಿ ಅಕಳಂಕ ಎಂಬ ಜೈನಗುರುಗಳು ವೀರಶೈವರ ಪಕ್ಷವನ್ನು ವಹಿಸಿ ಬೌದ್ಧರ ಸಂಗಡ ವಾದಿಸಿದರೆಂದು ಕ್ರಿ ಶ. ೧೧೨೮ ರಲ್ಲಿ ಬರೆದ ಶ್ರವಣಬೆಳಗುಳದಲ್ಲಿರುವ ಲೇಖನದಿಂದ ಗೊತ್ತಾಗುತ್ತದೆ. ವೀರಶೈವರು ತಮ್ಮ ಮತ ಪ್ರಾಶಸ್ತ್ಯತೆಯನ್ನು ತಮ್ಮ ಗುರುಗಳಿಂದ ಕಾಪಾಡಿಕೊಂಡರೆಂಬ ಉದ್ದೇಶದಿಂದಲೇ ಈಪ್ರಕಾರ ಜೈನರು ಬರೆದಿರಬಹುದೆಂದು ಯೋಚಿಸಿದರೂ ಆಕಾಲದಲ್ಲಿ ವೀರಶೈವರಿದ್ದರೆಂಬುದು ಮಾತ್ರ ಸಿದ್ಧವಾಗುತ್ತದಷ್ಟೆ.

(೪) ಮಿ॥ ರೈಸ್ ಸಾಹೇಬರು ತಮ್ಮ ಪುಸ್ತಕದ ೨೧೦ ನೆಯ ಪುಟದಲ್ಲಿ ಬರೆದಿರುವುದೇನೆಂದರೆ—"ಗಂಗವಂಶದಲ್ಲಿನ ವೀರಪ್ಪ ಎಂಬ ರಾಜನು ಕ್ರಿ. ಶ. ೮೫೦ ರಲ್ಲಿ ರಾಜ್ಯವಾಳುತ್ತಿದ್ದಾಗ ಆ ಕಾಲದ ಶಿಲಾಲಿಪಿಗಳಲ್ಲಿ ವೀರಶೈವಯೋದ್ಧರ ಗುರುತುಗಳನ್ನು ತೋರಿಸತಕ್ಕ ಚಿತ್ರಗಳಿವೆ.

(೫) ಮಿ॥ ಫಿಲಿಪ್ ಬ್ರೌನ್ ಸಾಹೇಬರು "Karnatik Chronology" ಎಂಬ ಪುಸ್ತಕದ ೪೧ ನೆಯ ಪುಟದಲ್ಲಿ ಹೇಳಿರುವುದೇನೆಂದರೆ—"ಕ್ರಿ. ಶ. ೫ನೆಯ ಶತಮಾನದಲ್ಲಿ ರಾಜ್ಯವಾಳುತ್ತಿದ್ದ ೨೧ನೆಯ ರಾಜನು ವೀರಶೈವರ ಪಕ್ಷಪಾತಿಯಾಗಿದ್ದನು."

(೬) ಕ್ರಿ. ಶ. ಆರನೆಯ ಶತಮಾನದಲ್ಲಿ ಕಾಶಿಯಲ್ಲಿ ರಾಜ್ಯವಾಳು ತ್ತಿದ್ದ ಜಯನಂದದೇವನು ಅಲ್ಲಿರತಕ್ಕ ಶ್ರೀ ವಿಶ್ವಾರಾಧ್ಯ ಸಿಂಹಾಸನಕ್ಕೆ ಜಂಗಮಪುರವನ್ನು ಉಂಬಳಿಯಾಗಿ ಕೊಟ್ಟಿದ್ದನೆಂದು ತಾಮ್ರಶಾಸನದಿಂದ ಗೊತ್ತಾಗುತ್ತದೆ.

(೭) ಆದಿ ಶಂಕರಾಚಾರ್ಯರು ಯಾವಯಾವ ಮತದವರ ಸಂಗಡ ವಾದಿಸಿದರೆಂಬುದನ್ನೂ ಆಯಾಯ ಮತದವರ ಚಿಹ್ನೆಗಳನ್ನೂ ಕುರಿತು ಆನಂದಗಿರಿಯು ಶಂಕರದಿಗ್ವಿಜಯ ಗ್ರಂಥದಲ್ಲಿ ವಿವರಿಸಿದ್ದಾನೆ. ಅದರಲ್ಲಿ ಜಂಗಮರ ಸಂಗಡ ವಾದಿಸಿದರೆಂತಲೂ, ಜಂಗಮರು ತಲೆಗೆ ಲಿಂಗವನ್ನು ಧರಿಸಿದ್ದರೆಂತಲೂ, ಸ್ಪಷ್ಟವಾಗಿ ಹೇಳಿದೆ. ಉತ್ತರಹಿಂದೂಸ್ಥಾನದಲ್ಲಿ ವೀರಶೈವರಿಗೆ ಜಂಗಮರೆಂದು ಹೇಳುವ ರೂಢಿಯು ಈಗಲೂ ಇದೆ.

(೮) ಕ್ರಿ. ಶ. ಮೂರನೆಯ ಶತಮಾನದಲ್ಲಿದ್ದ ಮಾಣಿಕ್ಯವಾಚಕರ್ ಎಂಬ ಮಹಾಮಹಿಮಾಶಾಲಿಗಳು ಒರೆದಿರುವ ತಿರುವಾಚಗಂ ಎಂಬ ಗ್ರಂಥವು ತಮಿಳು ಭಾಷೆಯಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದೆ. ಇವರು ವೀರಶೈವರೆಂಬುದಕ್ಕೆ ಇವರ ಗ್ರಂಥವೇ ಸಾಕ್ಷಿಯಾಗಿದೆ ಶ್ರೀ. ಆರ್. ಎಸ್. ವೇದಾಚಲಂ ಎಂಬ ಪಂಡಿತರು Tamilian Antiquary ಎಂಬ ಗ್ರಂಥದಲ್ಲಿ ಈ ಶಿವಶರಣರು ವೀರಶೈವರಿದ್ದರೆಂದು ಅನೇಕ ಆಧಾರಗಳಿಂದ ದೃಢೀಕರಿಸಿದ್ದಾರೆ.

(೯) ನಕ್ಕೀರರ್ ಎಂಬ ಪ್ರಸಿದ್ಧ ತಮಿಳುಕವಿಗಳು ಕೂಡಾ ವೀರಶೈವರಿದ್ದರೆಂದು ಶ್ರೀ. ವೇದಾಚಲಂ ಪಂಡಿತರೇ ಹೇಳಿದ್ದಾರೆ. ಈ ಶಿವಶರಣರು ಕ್ರಿ. ಶ. ೧ ನೆಯ ಶತಮಾನದಲ್ಲಿದ್ದರು.

(೧೦) ಕ್ರಿ. ಶ ಪೂರ್ವ ೩ ನೆಯ ಶತಮಾನದಲ್ಲಿ ತಿರುವಳ್ಳುವರ್ ಎಂಬ ಶಿವಶರಣರು "ತಿರುಕುರುಳ್" ಎಂಬ ಗ್ರಂಥವನ್ನು ತಮಿಳು ಭಾಷೆಯಲ್ಲಿ ಬರೆದಿದ್ದಾರೆ. ವೇಡಿವೇಲುಪಿಳ್ಳೆ ಎಂಬ ವಿದ್ವಾಂಸರು ಈ ಗ್ರಂಥಕ್ಕೆ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯಕಾರರು ಮೂಲಗ್ರಂಥಕರ್ತೃ

ಗಳಾದ ತಿರುವಳ್ಳುವರ್ ವೀರಶೈವರಿದ್ದರೆಂದು ಹೇಳಿದ್ದಾರೆ. ಆ ಗ್ರಂಥ ದಿಂದಲೂ ಅವರು ವೀರಶೈವರಿದ್ದರೆಂಬುದು ಸ್ಪಷ್ಟವಾಗುತ್ತದೆ.

ಈ ಪ್ರಕಾರ ಶ್ರೀ ಬಸವಣ್ಣನವರು ಅವತರಿಸುವುದಕ್ಕಿಂತ ಪೂರ್ವ ದಲ್ಲಿಯೇ ಸಾವಿರಾರು ವರ್ಷಗಳಿಂದಲೂ ವೀರಶೈವ ಮತವು ಪ್ರಚಾರದಲ್ಲಿ ದ್ದಿತೆಂಬುದಕ್ಕೆ ಅನೇಕ ಆಧಾರಗಳಿದ್ದರೂ ಶ್ರೀ ಬಸವಣ್ಣನವರೇ ಈ ಮತವನ್ನು ಹೊಸದಾಗಿ ಏರ್ಪಡಿಸಿದರೆಂದು ಅನೇಕರು ತಿಳಿದುಕೊಳ್ಳಲು ಮುಖ್ಯಕಾರಣವೇನೆಂದರೆ—ಈ ವೀರಶೈವ ಮತವು ಜೈನ ಮತ್ತು ಶೈವ ಮತಗಳ ಪ್ರಾಬಲ್ಯದಿಂದ ಶ್ರೀ ಬಸವಣ್ಣನವರ ಪೂರ್ವದಲ್ಲಿ ಬಹು ಕ್ಷೀಣಿಸಿ ಹೋಗಿದ್ದಿತು. ಆದುದರಿಂದ ಕರ್ನಾಟಕದಲ್ಲಿ ವಿರಳವಾಗಿದ್ದ ಈ ಮತವು ಶ್ರೀ ಬಸವಣ್ಣನವರಿಂದಲೇ ಈ ದೇಶದಲ್ಲಿ ಬಹು ಪ್ರಬಲವಾಗಿ ವ್ಯಾಪಿಸಲು, ಇವರೇ ಈ ಮತವನ್ನುಂಟುಮಾಡಿದರೆಂದು ತಿಳಿದುಕೊಂಡರು.

ವೀರಶೈವಮತವೇನೋ ಶ್ರೀ. ಬಸವಣ್ಣನವರ ಪೂರ್ವದಲ್ಲಿಯೂ ಇದ್ದಿತು. ಆದರೆ ಅಂತ್ಯಜಾದಿಯಾಗಿ ಎಲ್ಲರಿಗೂ ಲಿಂಗಧಾರಣಮಾಡಿ ಅವರ ಪೂರ್ವಜಾತಿಯನ್ನೇ ಮರೆತು ಬಳಿಕೆಯಲ್ಲಿಟ್ಟುಕೊಳ್ಳುವಂತಹ, ಮತ್ತು ಜನ್ಮಕ್ಕೆ ಪ್ರಾಧಾನ್ಯವಿಲ್ಲದೆ ಶೀಲಾಚಾರಗಳಿಗೇನೇ ಪ್ರಾಮುಖ್ಯತೆ ಯನ್ನು ಕೊಟ್ಟು, ವರ್ಣಗಳನ್ನೇ ತೆಗೆದುಹಾಕಿ, ಸ್ತ್ರೀಯರಿಗೂ ಪುರುಷರಂ ತೆಯೇ ಧಾರ್ಮಿಕ ಸ್ವಾತಂತ್ರ್ಯವನ್ನುಂಟುಮಾಡಿದಂತಹ ಬಸವಣ್ಣನವರ ವೀರ ಶೈವ ಮತವೇ ಪೂರ್ವದಲ್ಲಿಯೂ ಇದ್ದಿತೇ ? ಎಂದು ಅನೇಕರು ಪ್ರಶ್ನೆ ಮಾಡುವುದುಂಟು. ಏಕೆಂದರೆ, ಇವುಗಳೆಲ್ಲಾ ಅವೈದಿಕರೀತಿಗಳೆಂತಲೂ ಬಸವಣ್ಣನವರೇ ಇವುಗಳನ್ನು ವೀರಶೈವ ಮತದಲ್ಲಿ ಹೊಸದಾಗಿ ಸೇರಿಸಿದ ರೆಂತಲೂ ಅವರು ತಿಳಿದಿದ್ದಾರೆ. ಇದು ಯುಕ್ತವಲ್ಲ.

ಕಾಮಿಕಾದಿ ವಾತುಲಾಂತ ೨೮ ಶಿವಾಗಮಗಳೇ ವೀರಶೈವರಿಗೆ ಪ್ರಮಾಣ ಗ್ರಂಥಗಳೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಮತ್ತು ಈ ಶಿವಾಗಮಗಳು ಹನ್ನೆರಡನೆಯ ಶತಮಾನಕ್ಕಿಂತಲೂ ಪೂರ್ವದವುಗಳೆಂ

ಬಂಶವನ್ನು ಎಂತಹ ವಿತಂಡವಾದಿಯು ಕೂಡಾ ಒಪ್ಪದಿರಲಾರನು. ಏಕೆಂದರೆ, ಅನೇಕ ಶೈವಪುರಾಣಗಳಲ್ಲಿ ಈ ಆಗಮಗಳ ವಿಷಯವು ವಿವರವಾಗಿ ವಿವರಿಸಲ್ಪಟ್ಟಿದೆ. ಪುರಾಣಗಳ ಕಾಲಮಾನದ ವಿಷಯದಲ್ಲಿ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಅವು ಹನ್ನೆರಡನೆಯ ಶತಮಾನದಿಂದ ಇತ್ತಲಾಗಿ ಉಂಟಾದವುಗಳೆಂದು ಮಾತ್ರ ಈವರೆಗೆ ಯಾರೂ ಪ್ರತಿಪಾದಿಸಿಲ್ಲ. "ವೇದಾಗಮ ಪುರಾಣೇತಿಹಾಸ" ಎಂಬ ರೂಢಿಯಲ್ಲಿರುವ ಈ ಶಬ್ದಸಮುಚ್ಚಯವು ಕೂಡಾ ಆಗಮಕಾಲವು ಇತಿಹಾಸ ಪುರಾಣಗಳಿಗಿಂತಲೂ ಪ್ರಾಚೀನವಾದುದೆಂಬುದನ್ನೇ ವ್ಯಕ್ತಪಡಿಸುತ್ತದೆ. ಆದಕಾರಣ ಬಸವಣ್ಣನವರು ವೀರಶೈವಮತದಲ್ಲಿ ಯಾವ ಸುಧಾರಣೆಗಳನ್ನು ಅಥವಾ ಸಂಕರವನ್ನು ಮಾಡಿದರೆಂದು ಅನೇಕರು ತಿಳಿದಿದ್ದಾರೆಯೋ ಆ ವಿಷಯಗಳು ಆಗಮಗಳಲ್ಲಿ ಯಾವ ಪ್ರಕಾರ ಹೇಳಲ್ಪಟ್ಟಿವೆಯೆಂಬುದನ್ನು ನೋಡೋಣ.

ಪಾರಮೇಶ್ವರಾಗಮದಲ್ಲಿ ಹೇಳಿರುವುದೇನೆಂದರೆ:—

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಯೇಚಾನ್ಯ ಜಾತಯಃ ।
ಲಿಂಗಧಾರಣ ಮಾತ್ರೇಣ ಶಿವಏವನಸಂಶಯಃ ॥ ಪಟಲ ೧. ಶ್ಲೋ ೫೮.

"ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಇನ್ನಾವ ಜಾತಿಯವರಾಗಿದ್ದರೂ ಅವರು ಲಿಂಗಧಾರಿಗಳಾದ ಮಾತ್ರದಲ್ಲಿಯೇ ಸಾಕ್ಷಾತ್ ಶಿವಸ್ವರೂಪಿಗಳಾಗುತ್ತಾರೆ."

ಈ ಪ್ರಕಾರ ಲಿಂಗಾಂಗಿಗಳಾದವರಲ್ಲಿ ಅನಂತರ ಉಚ್ಚನೀಚತ್ವಗಳನ್ನು ಎಣಿಸಬಾರದೆಂಬ ವಿಷಯದಲ್ಲಿ,

ನಬಾಲ ವೃದ್ಧಭೇದೋಽಸ್ತಿ ನಮಸ್ಕಾರಾದಿ ಪೂಜನೆ ।
ಸರ್ವೇಶಿವಂದನೀಯಾಹಿ ವಿಧವಾಃ ಪುಷ್ಪಿಣೀಮುಖಾ ॥ ಪಟಲ ೧ ಶ್ಲೋ ೬೧

"ನಮಸ್ಕಾರ ಅಥವಾ ಪೂಜಾದಿಗಳನ್ನು ಮಾಡುವುದಾದರೆ ಆತನು ಬಾಲಕ ಅಥವಾ ವೃದ್ಧ ಅವಳು ವಿಧವೆ ಅಥವಾ ಮುತ್ತೈದೆ ಎಂಬ ಭಿನ್ನ ಭೇದಗಳನ್ನು ಮಾಡದೆ ಸಕಲರೂ ಪೂಜ್ಯರೆಂದೇ ತಿಳಿಯಬೇಕು."

ಈ ಪ್ರಕಾರ ಸಕಲ ವೀರಶೈವರೂ ಪೂಜ್ಯರಾಗುವ ಕಾರಣವನ್ನು ಕುರಿತು,

ಯಸ್ಯಾಸ್ತಿ ಭಕ್ತಿರೀಶಾನಿ ವೀರಶೈವಮತಾಶ್ರಯೆ ।
ಭಕ್ತಿಮಾತ್ರಪವಿತ್ರಾಹಿ ಸರ್ವಏವಾಧಿಕಾರಿಣಃ ॥ ಪಟಲ ೧. ಶ್ಲೋ ೬೨.

" ಪಾರ್ವತಿ, ವೀರಶೈವಮತದ ವಿಷಯದಲ್ಲಿ ಯಾರಿಗೆ ಭಕ್ತಿಯಿದೆಯೋ ಅವರು ಆ ಭಕ್ತಿಯಿಂದಲೇ ಪವಿತ್ರರಾಗುತ್ತಾರೆ. ಈ ಭಕ್ತಿಮಾರ್ಗವನ್ನನುಸರಿಸಲು ಸಕಲರಿಗೂ ಸಮಾನವಾದ ಅಧಿಕಾರವಿದೆ. "

ಇದೇ ವಿಷಯವಾಗಿ ಸೂಕ್ಷ್ಮಾಗಮದಲ್ಲಿ,

ಯಸ್ಯೈವಂ ಶಾಂಭವೀದೀಕ್ಷಾ ಜಾತಾಗುರುಕೃಪಾವಶಾತ್ ।
ಪೂರ್ವಜಾತ್ಯಾದಿಕಂತಸ್ಯ ನಸ್ಮರೇತ್ಪ್ರಾಕೃತಂಹಿತತ್ ॥ ಪಟಲ ೫. ಶ್ಲೋ ೬೩

" ಯಾರಿಗೆ ಗುರುಕೃಪೆಯಿಂದ ಈ ಶಿವದೀಕ್ಷೆಯು ಪ್ರಾಪ್ತವಾಗುತ್ತದೆಯೊ ಅವರ ಮುಂಚಿನ ಜಾತಿ ಮೊದಲಾದವುಗಳನ್ನು ಎಣಿಸಬಾರದು. "

ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಮಲಾಂಬುಜಾತ್ ।
ಪುನರ್ಜಾತಸ್ಯಾತ್ಮಜನ್ಮ ಜಾತ್ಯಾದಿನಚಕಲ್ಪಯೇತ್ ॥ ಪಟಲ ೫ ಶ್ಲೋ ೬೪.

" ಪರಮಪವಿತ್ರವಾದ ಗುರುಕರಕಮಲದಿಂದ ಭಕ್ತನು ಜನ್ಮವೆತ್ತುವುದರಿಂದ ಆತನ ಸ್ವಜನ್ಮ ಮತ್ತು ಸ್ವಜಾತಿಗಳ ಕಲ್ಪನೆಯೇ ಉಳಿಯುವುದಿಲ್ಲ. "

ಪಾಷಾಣಾದಿಕೃತಂಲಿಂಗಂ ಯದ್ವತ್ಪೂಜ್ಯಂ ಪ್ರತಿಷ್ಠಿತಂ ।
ನೀಚವಂಶೋದ್ಭವಶ್ಚಾಪಿ ಭಕ್ತಶ್ಚೇದೀಶ್ವರೇತಥಾ ॥ ಪಟಲ ೫. ಶ್ಲೋ ೬೫.

" ಪಾಷಾಣಾದಿಗಳಿಂದ ಮಾಡಲ್ಪಟ್ಟ ಲಿಂಗವು ಪ್ರಾಣಪ್ರತಿಷ್ಠಿತವಾದೊಡನೆ ಹೇಗೆ ಪೂಜೆಗೆ ಯೋಗ್ಯವಾಗುತ್ತದೆಯೋ ಹಾಗೆಯೇ ನೀಚವಂಶದಲ್ಲಿ ಜನಿಸಿದವನುಕೂಡಾ ಶಿವಭಕ್ತನಾಗುವುದರಿಂದ ಆತನು ಪೂಜ್ಯನಾಗುತ್ತಾನೆ. "

ಭಕ್ತಸ್ಯಪ್ರಾಕ್ತನಂಜನ್ಮ ನಾಮಜಾತ್ಯಾದಿಕಂಚಯತ್ |
ಪೃಚ್ಛೇದ್ವಾಕಥಯೇದ್ವಾಪಿ ಸರ್ವೆಪಾತಕಿನಾಂವರಃ || ಪಟಲ ೫ ಶ್ಲೋ ೬೬.

" ಯಾರು ಭಕ್ತನ ಹಿಂದಣ ಜನ್ಮ, ಜಾತಿ, ಹೆಸರು ಮೊದಲಾದವುಗಳನ್ನು ವಿಚಾರಿಸುತ್ತಾರೆಯೋ ಅಥವಾ ಹೇಳುತ್ತಾರೆಯೋ ಅವರು ಪಾಪಿಗಳಲ್ಲಿ ಪಾಪಿಗಳು. "

ಈ ಆಗಮವಚನಗಳ ಮೇಲಿಂದ ಶ್ರೀ ಬಸವಣ್ಣನವರು ವೀರಶೈವ ಮತದಲ್ಲಿ ಈ ವಿಷಯಗಳ ಸುಧಾರಣೆಯನ್ನಾಗಲಿ ಅಥವಾ ಸಂಕರವನ್ನಾಗಲಿ ಮಾಡದೆ ಶುದ್ಧ ವೈದಿಕ ಪದ್ಧತಿಗಳನ್ನೇ ಊರ್ಜಿತಗೊಳಿಸಿದರೆಂಬುದು ಸ್ಪಷ್ಟವಾಗುವುದಿಲ್ಲವೇ ?

ಈವರೆಗಿನ ಸಂಕ್ಷಿಪ್ತ ವಿವರಣೆಯಿಂದಲೇ ಶ್ರೀ ಬಸವಣ್ಣನವರು ಅವತರಿಸುವದಕ್ಕೆ ಮುಂಚೆ ಕರ್ನಾಟಕದಲ್ಲಿ ರಾಜಕೀಯ ಶಾಂತತೆಯಿದ್ದಿತೇ ವಿನಾ ಜನಾಂಗದ ಆತ್ಮೋನ್ನತಿಗೆ ಅನುಕೂಲವಾದ ಧಾರ್ಮಿಕಸ್ಥಿತಿಯಿರಲಿಲ್ಲವೆಂತಲು ಮತ್ತು ವೀರಶೈವ ಮತವು ಬಹು ಮಟ್ಟಿಗೆ ಲೋಪ ವಾಗಿಯೇ ಹೋಗಿದ್ದಿತೆಂತಲು ವಾಚಕರಿಗೆ ವೇದ್ಯವಾಗದೆ ಇರಲಾರದು. ಇಷ್ಟೇ ಅಲ್ಲ ; ಅಳಿದು ಹೋಗಿದ್ದ ಆ ಪ್ರಾಚೀನ ವೀರಶೈವಮತವನ್ನೇ ಶ್ರೀ ಬಸವಣ್ಣನವರು ಪುನಃ ಶಾಸ್ತ್ರ ಸಮ್ಮತವಾದ ರೀತಿಯಲ್ಲಿಯೇ ಪ್ರಸಾರಮಾಡಿದರೆಂಬಂಶವೂ ವ್ಯಕ್ತವಾಗಿರಬಹುದು.

## ೨ ನೆಯ ಪ್ರಕರಣ.

# ಜನನ ಮತ್ತು ಗುರುಕುಲವಾಸ.

ಈಗ ವಿಜಾಪುರಜಿಲ್ಲೆಯಲ್ಲಿ ಬಾಗೇವಾಡಿ ಎಂಬದೊಂದು ತಾಲ್ಲೂಕು ಸ್ಥಳವಿದೆಯಷ್ಟೆ. ಇದಕ್ಕೆ ಬಸವನಬಾಗೇವಾಡಿಯೆಂತಲೂ ಹೇಳುವುದುಂಟು ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಇದಕ್ಕೆ ಇಂಗಳೇಶ್ವರ ಬಾಗವಾಡಿ ಎಂದು ಹೇಳುತ್ತಿದ್ದರು. ಈಗ ಈ ಗ್ರಾಮಕ್ಕೆ ಆರು ಮೈಲುಗಳದೂರದಲ್ಲಿರುವ ಇಂಗಳೇಶ್ವರ ಎಂಬ ಹಳ್ಳಿಯು ಆ ಕಾಲದಲ್ಲಿ ಪ್ರಸಿದ್ಧ ಪಟ್ಟಣವಾಗಿಯೂ, ಈ ಬಾಗೇವಾಡಿಯು ಒಂದು ಅಗ್ರಹಾರವಾಗಿಯೂ ಇದ್ದವು. ಈ ಅಗ್ರಹಾರದಲ್ಲಿ ಕಾಶ್ಯಪಗೋತ್ರ ಸಾಂಖ್ಯಾಯನ ಪ್ರವರದ ಮಂಡಗಿ ಲಿಂಗಭಟ್ಟನೆಂಬ ಒಬ್ಬ ಶೈವಬ್ರಾಹ್ಮಣ ನಿದ್ದನು. ಆತನಿಗೆ ಮಹಾ ಶಿವಭಕ್ತಿಪರಾಯಣನೂ, ಕಾರ್ಯದಕ್ಷನೂ ಆದ ಮಾದ (ಮಹಾದೇವ) ಎಂಬೊಬ್ಬ ಮಗನಿದ್ದನು. ಈತನು ತನ್ನ ಸಾಹಸದಿಂದ ಆ ಅಗ್ರಹಾರದ ಮುಖ್ಯಾಧಿಕಾರಿ (ಗ್ರಾಮಣೀಮಣಿ) ಯಾಗಲು ಆತನಿಗೆ ಮಾದರಸನೆಂದು ಕರೆಯುವ ವಾಡಿಕೆಯುಂಟಾಯಿತು. ಆ ಮಾದರಸನು ಸುಶೀಲೆಯೂ, ಸುಗುಣಿಯೂ, ಮಹಾ ದೈವಭಕ್ತಳೂ ಆದ ಮಾದಲಾಂಬಿಕೆಯೆಂಬ ತನ್ನ ಪತ್ನಿಯೊಂದಿಗೆ ಸುಖದಿಂದ ಕಾಲ ಕಳೆಯುತ್ತಿರುವಾಗ ತಮಗೆ ಮಕ್ಕಳೇ ಇಲ್ಲವಲ್ಲಾ ! ಎಂಬ ಚಿಂತೆಯು ಆ ದಂಪತಿಗಳಿಗುಂಟಾಯಿತು. ಈ ಮಾದರಸನಿಗೆ ಸಕ್ಕಣ್ಣ, ಅಪ್ಪಣ್ಣ ಎಂಬೀರ್ವ ಪುತ್ರರೂ, ನಾಗಲಾಂಬಿಕೆ ಯೆಂಬೊಬ್ಬ ಕುವರಿಯೂ ಇದ್ದರೆಂತಲು ಅನಂತರ ತನ್ನ ಹೊಲದಲ್ಲಿ ಬೆಳೆದ ಬಾಗಿದ ಹೊಡೆಯಲ್ಲಿದ್ದ ಶಿಶುವನ್ನು ತಂದು ಅದಕ್ಕೆ ಬಸವ ಎಂಬ ಹೆಸರನ್ನಿಟ್ಟು ಮಗನನ್ನಾಗಿ ಮಾಡಿಕೊಂಡನೆಂತಲು ಷಡುಷಷ್ಠಿ ಪುರಾತನರ ಪುರಾಣದಲ್ಲಿ ಬರೆದಿರುವುದಾಗಲಿ, ಅಥವಾ ಪುತ್ರರಿಲ್ಲದೆ ನಾಗಲಾಂಬಿಕೆ

ಯೆಂಬೊಬ್ಬ ಪುತ್ರಿಯಿದ್ದಳೆಂದು ಬಸವಪುರಾಣದಲ್ಲಿ ಉಕ್ತವಾಗಿರುವುದಾಗಲಿ, ಇಲ್ಲವೆ ಪದ್ಮಾವತಿಯೆಂಬೊಬ್ಬ ಮಗಳಿದ್ದಳೆಂದು ಬಿಜ್ಜಳಚರಿತೆಯಲ್ಲಿ ಬರೆದಿರುವುದಾಗಲಿ ನಿಜಾಂಶಗಳೆಂದು ತೋರುವುದಿಲ್ಲ. ಏಕೆಂದರೆ, ಸಿಂಗಿರಾಜಪುರಾಣದ ಐದನೆಯ ಸಂಧಿಯಲ್ಲಿ ಈ ಪ್ರಕಾರ ಹೇಳಿದೆ. —

" ಪೂರ್ವಜನ್ಮದಲ್ಲಿ ಯಾವ ಸ್ತ್ರೀಯಳು ರಜಸ್ವಲೆಯಾಗಿ ಅಡಿಗೆಯನ್ನು ಮಾಡುವಳೋ ಅವಳು ಬಂಜೆಯಾಗುವಳು. ಎಲೌ ಮಾದಲಾಂಬಿಕೆಯೇ ? ರಜಸ್ವಲೆಯಾದ ಕಾಲದಲ್ಲಿ ಮಾಡಿದ ಕಾರ್ಯದಿಂದ ಪ್ರಾಪ್ತವಾದ ದೋಷವನ್ನು ಪರಿಹರಿಸುವ ಒಂದು ವ್ರತವನ್ನು ನಿನಗೆ ಹೇಳುತ್ತೇನೆ. ಆ ವ್ರತದ ಪ್ರಭಾವದಿಂದ ನೀನು ಒಬ್ಬ ಪುತ್ರನನ್ನು ಪಡೆಯುವಿ. ನಂದೀ ವ್ರತವೆಂಬುದೊಂದು ಶ್ರೇಷ್ಠವಾದ ವ್ರತವುಂಟು. ಇದನ್ನು ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಉಪಕ್ರಮಿಸಿ ಮೂರುವರ್ಷ ಪೂರ್ತಿಯಾಗುವವರೆವಿಗೂ ಮಾಸಮಾಸದಲ್ಲಿಯೂ ಆಚರಿಸಬೇಕೆಂದು ನಾರದಋಷಿಯು ಹೇಳಲು ಅದೇ ಪ್ರಕಾರ ಮಾದಲಾಂಬಿಕೆಯು ಮೂರುವರ್ಷ ಮೂವತ್ತಾರುಸಾರೆ ನಂದೀ ವ್ರತವನ್ನು ವಿಧಿವತ್ತಾಗಿ ಆಚರಿಸಿ ಆ ಬಾಗವಾಡಿಯ ಶಿವಾಲಯಕ್ಕೆ ಹೋಗಿದ್ದಳು. ಆ ದಿವಸ ಶನಿಪ್ರದೋಷವಾದುದರಿಂದ ಆ ಅಗ್ರಹಾರದಲ್ಲಿದ್ದ ಸಮಸ್ತ ಶಿವಭಕ್ತ ಬ್ರಾಹ್ಮಣರೂ ಶಿವಾಲಯಕ್ಕೆ ಬಂದು ಶಿವಪೂಜೆ, ಭಜನೆ ಧ್ಯಾನಾದಿಗಳಲ್ಲಿ ಮಗ್ನರಾಗಿದ್ದರು. ಒಂದುಕಡೆ ಪುರಾಣವು ಹೇಳಲ್ಪಡುತ್ತಾ ಇದ್ದಿತು. ಮಾದಲಾಂಬಿಕೆಯು ನಂದೀಶ್ವರನನ್ನು ಪೂಜಿಸಿ ಪುರಾಣವನ್ನು ಕೇಳುತ್ತಾ ಕುಳಿತುಕೊಂಡಳು. ಮಹಾಂತಚಕ್ರೇಶ್ವರನ ಸೊಸೆಯಾದ ಉಮಾಕಾಂತೆಯು ನಂದೀ ನೋಂಪಿಯ ಮಹಿಮೆಯಿಂದ ತನ್ನ ಪತಿಯಪ್ರಾಣವನ್ನು ಆ ನಂದೀಶ್ವರನಿಂದ ಪಡೆದಳೆಂಬ ಕಥೆಯನ್ನು ಪರಮವಿಶ್ವಾಸದಿಂದ ಕೇಳಿದವಳಾಗಿ ಆ ನಂದೀಶ್ವರನನ್ನೇ ಧ್ಯಾನಿಸುತ್ತ ಮನೆಗೆಬರಲು ಆ ದಿನವೇ ಮಾದಲಾಂಬಿಕೆಯು ಪುಷ್ಪಿಣಿಯಾಗಿ ಶುದ್ಧ ಸ್ನಾನದಿಂದ ಪರಿಶುದ್ಧಳಾಗಿರಲು ಎಂಟನೆಯದಿನದಲ್ಲಿ

ಸತೀಪತಿಗಳು ವೃಷಭಧ್ಯಾನೈಕಚಿತ್ತರಾಗಿ ಸಾಮರಸ್ಯವನ್ನು ಹೊಂದಲು ಮಾದಲಾಂಬಿಕೆಯು ಗರ್ಭವತಿಯಾದಳು. ಅನಂತರ ಒಂಬತ್ತನೆಯ ತಿಂಗಳಲ್ಲಿ ಮಾದಲಾಂಬಿಕೆಯ ಗರ್ಭದಿಂದ ಬಸವನು ತನ್ನ ಪಾದಗಳನ್ನು ಮುಂದಾಗಿಚಾಚಿ ಜನಿಸಿದನು. ”

ಇದರ ಮೇಲಿಂದ ಮಾದರಸನಿಗೆ ಮಕ್ಕಳೇ ಇರಲಿಲ್ಲವೆಂತಲೂ ಮಾದಲಾಂಬಿಕೆಯು ನಂದೀವ್ರತವನ್ನಾಚರಿಸಿ ಪುತ್ರನನ್ನು ಪಡೆದಳೆಂತಲೂ ಸ್ಪಷ್ಟವಾಗುವುದಿಲ್ಲವೇ ? ಮಾದಲಾಂಬಿಕೆಯು ನಂದೀವ್ರತವನ್ನು ಮೂರು ವರ್ಷ ಅವಿಚ್ಛಿನ್ನವಾಗಿ ಆಚರಿಸಿದ್ದರಿಂದಲೇ ಆ ನಂದಿಯ ಅವತಾರಿಯಾದ ಶ್ರೀಮದ್ಬಸವನನ್ನು ಮಾದಲಾಂಬಿಕೆಯು ಮೂರು ವರ್ಷ ಪರ್ಯಂತರ ತನ್ನುದರದಲ್ಲಿಟ್ಟುಕೊಂಡಿದ್ದಳೆಂದು ಬಸವಪುರಾಣಾದಿ ಕೆಲವು ಗ್ರಂಥಗಳಲ್ಲಿ ಹೇಳಿದಂತೆ ತೋರುತ್ತದೆ. ಶ್ರೀ ಬಸವನು ಅವತರಿಸಿದ ಕಾಲದಲ್ಲಿದ್ದ ಗ್ರಹಗಳ ವಿವರವು ಸಂಸ್ಕೃತ ಬಸವ ಪುರಾಣದಲ್ಲಿ ಈ ಪ್ರಕಾರ ಉದಾಹಂಸಲ್ಪಟ್ಟಿದೆ.

ಮೀನಸ್ಥಿತೇಭೃಗೋಃಪುತ್ರೇ ಮೇಷಸ್ಥೇಚ ದಿವಾಕರೇ ।
ತುಲಾಸ್ಥಿತೇಚ ತತ್ಪುತ್ರೇ ಕರ್ಕಟಸ್ಥೇ ಬೃಹಸ್ಪತೌ ॥ಅ ೪.ಶ್ಲೋ.೩೪॥
ಶಶಾಂಕೇ ರೋಹಿಣಿ ಸಂಸ್ಥೇ ಮಕರಸ್ಥೇಚ ಭೂಸುತೆ ।
ಶಿಶೋರರ್ಧೋದಯೇಜಾತೇ ಲಗ್ನೆ ಕರ್ಕಟ ಸಂಜ್ಞಕೆ ॥೩೫॥

ಈ ಗ್ರಹಗಳ ಮೇಲಿಂದ ಜಾತಕವು ಈ ಪ್ರಕಾರ ಏರ್ಪಡುತ್ತದೆ.

| | | | |
|---|---|---|---|
| ಶು. | ರ. | ಚ. | |
| | | | ಗು. |
| ಕು. | | | |
| | | ಶ. | |

ಇದರ ಮೇಲಿಂದ ಕರ್ನಾಟಕದ ಒಬ್ಬ ಪ್ರಸಿದ್ಧ ಜ್ಯೋತಿಷಜ್ಞರಾಗಿದ್ದ ಪರಲೋಕವಾಸಿಗಳಾದ ಹರಪನಹಳ್ಳಿ ಆರ್. ಶಾಂತಪ್ಪಾಜಿಯವರು ಬಹು ಶ್ರಮವಹಿಸಿ ಈ ಕೆಳಗೆ ಕಾಣಿಸಿದ ಪ್ರಕಾರ ಕುಂಡಲಿಯನ್ನು ಹಾಕಿ ಶಾಲಿವಾಹನ ಶಕೆ ೧೦೩೭ನೆಯ ಮನ್ಮಥ ಸಂವತ್ಸರದ ವೈಶಾಖ ಶುದ್ಧ ೪ ಶನಿವಾರ ಸೂರ್ಯೋದಯಾನಂತರ ಜನನಕಾಲ ಘಟಿಕಾ ೧೪-೨೪. ಕರ್ಕಟ ಲಗ್ನ ರೋಹಿಣಿ ನಾಲ್ಕನೆಯ ಚರಣದಲ್ಲಿ ಶ್ರೀ ಬಸವಣ್ಣನವರು ಅವತರಿಸಿದರೆಂದು ಗೊತ್ತುಮಾಡಿದ್ದಾರೆ.

| | | | |
|---|---|---|---|
| ಶು. | ರ. ಬು | ಚ. | ರಾ. |
| | | | ಲ. ಗು. |
| ಕುಜ. | | | |
| ಕೇತು. | | ಶನಿ. ವಕ್ರ. | |

ಮ॥ ಆರ್. ಶಾಂತಪ್ಪಾಜಿಯವರ ಅಭಿಪ್ರಾಯದ ಮೇಲಿಂದ ಕ್ರಿಸ್ತಶಕೆ ೧೧೧೫ನೆಯ ಸಂವತ್ಸರದಲ್ಲಿ ಶ್ರೀ ಬಸವಣ್ಣನವರು ಜನ್ಮವೆತ್ತಿದ್ದರೆಂದು ಗೊತ್ತಾಗುತ್ತದೆ. ಆದರೆ ಐತಿಹಾಸಿಕ ಆಧಾರಗಳ ಮೇಲಿಂದ ನೋಡಿದರೆ ಕ್ರಿ. ಶ. ೧೧೩೨ನೆಯ ಸಂವತ್ಸರದಲ್ಲಿ ಜನ್ಮವೆತ್ತಿರಬೇಕೆಂದು ಹೇಳಬೇಕಾಗುತ್ತದೆ. ಏಕೆಂದರೆ, ಬಿಜ್ಜಳ ಭೂಪಾಲನು ಕ್ರಿ. ಶ. ೧೧೬೮ನೆಯ ಸಂವತ್ಸರದಲ್ಲಿ ಕೊಲ್ಲಲ್ಪಟ್ಟನು. ಶ್ರೀ ಬಸವಣ್ಣನವರು ಕೂಡಾ ಅದೇ ಸಂವತ್ಸರದಲ್ಲಿಯೇ ಐಕ್ಯರಾಗಿದ್ದಾರೆ. ಎಂದರೆ, ೫೩ ವರ್ಷ ಜೀವಿಸಿದ್ದರೆಂದು ಶಾಂತಪ್ಪಾಜಿಯವರ ಲೆಕ್ಕದ ಮೇಲಿಂದ ಹೇಳಬೇಕಾಗುತ್ತದೆ. ಇದು, ಬಸವಣ್ಣನವರು ಮೂರುಪಟ್ಟ, ಚೆನ್ನಬಸವಣ್ಣನವರು ಎರಡು ಪಟ್ಟ ಇದ್ದರೆಂಬ ಜನವಾಡಿಕೆಗೆ ಸರಿಬರುವುದಿಲ್ಲ. ಇಷ್ಟೇ ಅಲ್ಲ, ಬಿಜ್ಜಳ

ರಾಜನು ಕ್ರಿ. ಶ. ೧೧೫೬ ರಿಂದ ೧೧೬೮ ರ ವರೆಗೆ ಹನ್ನೆರಡು ವರ್ಷ ಆಳಿದನೆಂದು ಎಲ್ಲಾ ಇತಿಹಾಸಜ್ಞರೂ ಹೇಳುತ್ತಿದ್ದಾರೆ. ಆ ಕಾಲದಲ್ಲಿಯೇ ಬಲದೇವನು ಆತನ ಮಂತ್ರಿಯಾಗಿದ್ದನು. ಬಲದೇವನು ಮಂತ್ರಿಯಾಗಿದ್ದಾಗಲೇ ಬಸವಣ್ಣನವರ ವಿವಾಹವಾಯಿತೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಎಂದರೆ ಕ್ರಿ. ಶ. ೧೧೫೬ನೆಯ ಸಂವತ್ಸರದಲ್ಲಿಯೇ ಬಸವಣ್ಣನವರ ವಿವಾಹವಾಯಿತೆಂದು ತಿಳಿದರೂ, ಆಗ ಅವರಿಗೆ ೪೧ ವರ್ಷಗಳಾಗಿರಬೇಕಾಯಿತು. ಇದು ಕೂಡಾ ಅಸಮಂಜಸವಾದುದೇ ಸರಿ. ಆದಕಾರಣ ಕ್ರಿ. ಶ. ೧೧೩೩ನೆಯ ಸಂವತ್ಸರದಲ್ಲಿ ಜನಿಸಿದ್ದರೆಂದು ತಿಳಿಯುವುದೇ ವಿಹಿತವಾಗಿದೆ. ಈ ೧೭ ವರ್ಷಗಳ ವ್ಯತ್ಯಾಸದ ಕಾರಣವನ್ನು ಜ್ಯೋತಿಷಜ್ಞರು ಪರಿಶೋಧಿಸತಕ್ಕ ಸಂಗತಿಯಾಗಿದೆ. ಅಂತು ಐತಿಹಾಸಿಕ ಆಧಾರಕ್ಕೆ ಇಷ್ಟು ಸಮೀಪವಾದ ಕಾಲಮಾನವು ಇನ್ನಾವ ಪುರಾಣ ಗ್ರಂಥಗಳಲ್ಲಿಯೂ ಕಂಡುಬರುವುದಿಲ್ಲ.

ಮಿ|| ವಿನ್‌ಸೆಂಟ್ ಸ್ಮಿತ್ ರವರು ಬರೆದಿರುವಂತೆ ವೀರಶೈವರು ಪುನರ್ಜನ್ಮವನ್ನು ನಂಬದಿರತಕ್ಕವರೇನೂ ಅಲ್ಲ. ಪುನರ್ಜನ್ಮವಾದಿಗಳೇ ಆಗಿದ್ದಾರೆ. ಶ್ರೀ ಶಂಕರಾಚಾರ್ಯರು ಶಂಕರನ ಅವತಾರವೆಂತಲೂ, ಶ್ರೀ ರಾಮಾನುಜಾಚಾರ್ಯರು ಶೇಷನ ಅವತಾರವೆಂತಲೂ, ಶ್ರೀ ಮಧ್ವಾಚಾರ್ಯರು ಮಾರುತಿಯ ಅವತಾರವೆಂತಲೂ, ಹೇಗೆ ಆಯಾಯ ಮತೀಯರು ತಿಳಿದಿದ್ದಾರೆಯೋ ಹಾಗೆಯೇ ಶ್ರೀ ಬಸವಣ್ಣನವರು ನಂದಿಯ ಅವತಾರವೆಂದು ವೀರಶೈವರು ಭಾವಿಸಿದ್ದಾರೆ. ನಂದೀವ್ರತದಿಂದಲೇ ಮಾದಲಾಂಬಿಕೆಯು ಇವರನ್ನು ಪಡೆದುದರಿಂದ ಇವರು ನಂದಿಯ ಅವತಾರವೆಂದು ನಂಬುವುದು ಯುಕ್ತವಾಗಿಯೇ ಇದೆಯಷ್ಟೆ. ಇಷ್ಟೇ ಅಲ್ಲ, ಭಗವಾನ್ ಬುದ್ಧದೇವನು ತನ್ನ ಹಿಂದಣ ನಾಲ್ವತ್ತು ಜನ್ಮಗಳ ಸ್ಥಿತಿಯನ್ನು ಹೇಗೆ ಅರಿತುಕೊಂಡಿದ್ದನೋ ಹಾಗೆಯೇ ಮಹಾನುಭಾವರಾದ

ಈ ಬಸವಣ್ಣನವರೂ ಕೂಡಾ ತನ್ನ ಏಳು ಜನ್ಮಗಳನ್ನು ತಿಳಿದು ಕೊಂಡು ಈ ಪ್ರಕಾರ ತಾನೇ ಹೇಳಿದ್ದಾರೆ.

" ಪ್ರಥಮಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಭೃತ್ಯನ ಮಾಡಿಯೆನ್ನನಿರಿಸಿಕೊಂಡಿದ್ದಿರಯ್ಯ | ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಕಾರುಣ್ಯವ ಮಾಡಿಕೊಂಡಿದ್ದಿರಯ್ಯ | ಮೂರನೆಯ ಭವಾಂತರದಲ್ಲಿ ನೀಲಲೋಹಿತನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಲೀಲಾವಿನೋದದಿಂದಿರಿಸಿಕೊಂಡಿದ್ದಿರಯ್ಯ | ನಾಲ್ಕನೆಯ ಭವಾಂತರದಲ್ಲಿ ಮನೋಹರನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಮನಃಪ್ರೇರಕನಾಗಲೆಂದಿರಿಸಿಕೊಂಡಿದ್ದಿರಯ್ಯ | ಐದನೆಯ ಭವಾಂತರದಲ್ಲಿ ಕಾಲಲೋಚನನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ಸರ್ವಕಾಲ ಸಂಸ್ಥಾರವ ಮಾಡಲೆಂದಿರಿಸಿಕೊಂಡಿದ್ದಿರಯ್ಯ | ಆರನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮಗೆ ಬಲ್ಲರುವಾಹನವಾಗಲೆಂದಿರಿಸಿಕೊಂಡಿದ್ದಿರಯ್ಯ | ಏಳನೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನಮಾಡಿ ಹೆಸರಿಟ್ಟು ಕರೆದು ನಿಮ್ಮವಕ್ಕೆ ಮಿಕ್ಕದ್ದಕ್ಕೆ ಯೋಗ್ಯನಾಗಲೆಂದಿರಿಸಿಕೊಂಡಿರುವಿರಯ್ಯ | ಇದು ಕಾರಣ ಕೂಡಲ ಸಂಗನ ದೇವಾ | ನೀವು ಬರಿಸಿದ ಭವಾಂತರದಲ್ಲಿ ನಾನು ಬರುತಲಿದ್ದೇನಯ್ಯ || "

ಶ್ರೀ ಬಸವನವತರಿಸಿದ ನಂತರ ನಡೆದ ಸಂಗತಿಗಳು ಸಿಂಗಿರಾಜ ಪುರಾಣದ ಐದನೆಯ ಸಂಧಿಯುಮೇಲಿಂದ ಈಪ್ರಕಾರ ಗೊತ್ತಾಗುತ್ತವೆ.

" ಮಾದರಸನು ಪುತ್ರ ಜನ್ಮೋತ್ಸವವನ್ನು ಅತಿವೈಭವದಿಂದ ನಡೆಯಿಸಿದನಂತರ ಆ ಶಿಶುವು ಕಣ್ಣುಗಳನ್ನು ಬಿಡದೆಯೂ, ಬಾಯನ್ನು ತೆರೆಯದೆಯೂ, ಅಳದೆ ಸುಮ್ಮನಿದ್ದುದನ್ನು ಆ ದಂಪತಿಗಳೂ ಬಂಧುವರ್ಗದವರೂ ನೋಡಿ ಭಯಭ್ರಾಂತರಾಗಿ ಚಿಂತೆಯಿಂದ ಯಂತ್ರ ಮಂತ್ರಾದಿಗಳನ್ನೂ ದೇವತಾ ಪ್ರಾರ್ಥನೆಗಳನ್ನೂ ಮಾಡಿಸಲುಪಕ್ರಮಿಸಿದರು. ಆ ದಿನವೇ ಕಪ್ಪಡಿ ಕ್ಷೇತ್ರದಿಂದ ಸಂಗಮೇಶ್ವರನು ತಪಸ್ವಿಯ ವೇಷವನ್ನುಧರಿಸಿ ತನ್ನ ಜೊತಿಯಲ್ಲಿ ಪಂಚಗಣಾಧೀಶ್ವರರನ್ನು ಕರೆದುಕೊಂಡು ಆ ಇಂಗಳೇಶ್ವರ ಬಾಗವಾಡಿಯಲ್ಲಿರುವ ಶಿವಾಲಯಕ್ಕೆಬಂದು ಕುಳಿತಿದ್ದನು. ಆಗ ಅಲ್ಲಿ

ಸಂಚರಿಸತಕ್ಕವರೆಲ್ಲರೂ ಶಿವಶಿವಾ ! ಮಾದಿರಾಜನ ಇಷ್ಟಾರ್ಥದಂತೆ ನಂದೀಶ್ವರನು ವರವನ್ನು ಕೊಟ್ಟರೂ ಈಗ ಹುಟ್ಟಿರುವ ಶಿಶುಮಾತ್ರ ಬಾಲಚೇಷ್ಟೆಗಳನ್ನು ಮಾಡದೆ ಸುಮ್ಮನಿದೆ. ಮಾದರಸನ ಪುಣ್ಯವು ಹೇಗಿದೆಯೋ ? ಎಂದು ಒಬ್ಬರಿಗೊಬ್ಬರು ಮಾತನಾಡುತ್ತಿದ್ದುದನ್ನು ಈ ತಪಸ್ವಿಗಳು ಕೇಳಿ ಪಂಚಗಣಾಧೀಶರೊಂದಿಗೆ ಮಾದರಸನ ಮನೆಗೆಹೊರಟರು. ದಾರಿಯಲ್ಲಿ ನಮಸ್ಕರಿಸಿ ತಮ್ಮ ಹೆಸರೇನೆಂದು ಕೇಳಿದವರಿಗೆ ಜಾತವೇದಿಮುನಿಗಳೆಂದು ಹೇಳುತ್ತಾ ಮಾದರಸನ ಮನೆಗೆ ಹೋದರು.

" ಆಗ ಮಾದರಸನು ಈ ತಪಸ್ವಿಗಳನ್ನು ಕಂಡು ನಮಸ್ಕರಿಸಿ ತನ್ನ ಮಗುವಿನ ವೃತ್ತಾಂತವನ್ನು ಹೇಳಿ ತಾವೇ ಒಳಗೆ ದಯಮಾಡಿಸಿ ಶಿಶುವನ್ನು ಪರೀಕ್ಷಿಸಬೇಕೆಂದು ಅವರನ್ನು ಒಳಗೆ ಕರೆದುಕೊಂಡು ಹೋದನು. ಆಗ ತಪಸ್ವಿಗಳು ತಮ್ಮ ಜೋಳಿಗೆಯಿಂದ ಭಸ್ಮವನ್ನು ತೆಗೆದು ಮಂತ್ರಿಸಿ ಆ ಮಗುವಿನ ಹಣೆಯಲ್ಲಿಧರಿಸಿ ಸರ್ವಾಂಗಕ್ಕೂ ಲೇಪಿಸಿದರು. ಆಕ್ಷಣದಲ್ಲಿಯೇ ಶಿಶುವು ಕಣ್ಣನ್ನು ಬಿಟ್ಟು ಅಳಲಾರಂಭಿಸಿತು. ಇದನ್ನು ಆ ತಾಯಿತಂದೆಗಳು ನೋಡಿ ಆ ಜಾತವೇದಿಮುನಿರಾಯನಿಗೆ ನಮಸ್ಕರಿಸಿ ಮಗುವನ್ನು ಮುನೀಶ್ವರನ ಪಾದಗಳಮೇಲಿಟ್ಟು ಮಹಾಸ್ವಾಮಿಗಳೇ ! ನೀವೇ ಈ ಶಿಶುವಿನ ಪರಮಗುರುಗಳು. ಈ ಶಿಶುವು ನಿಮ್ಮ ಶಿಶುವು. ಇದನ್ನು ಸಂರಕ್ಷಿಸತಕ್ಕ ಭಾರ ನಿಮ್ಮದು. ನಾವು ತಮ್ಮ ಅಪ್ಪಣೆಯಂತೆಯೇ ನಡೆದುಕೊಳ್ಳುತ್ತೇವೆ. ಎಂದು ಹೇಳಿಕೊಂಡರು. ಆಗ ಸಂಗಮನಾಥನು ಮಾದರಸನನ್ನು ಕುರಿತು ಹೇಳಿದುದೇನೆಂದರೆ.—

" ಈ ಬಾಲಕನು ವೃಷಭನ ವರದಿಂದ ಹುಟ್ಟಿರುವ ಕಾರಣ ಈತನಿಗೆ ಬಸವನೆಂದು ನಾಮಕರಣವನ್ನು ಮಾಡು. ಈತನು ಇನ್ನು ಸುಖದಿಂದಿರುವನು. ನಾವು ನಮ್ಮ ಇಷ್ಟಾರ್ಥವನ್ನು ಪೂರ್ತಿಮಾಡಿಕೊಳ್ಳುವುದಕ್ಕೋಸ್ಕರ ಈತನ ಇಷ್ಟಾರ್ಥವನ್ನು ಪೂರ್ತಿಮಾಡುವ ಇಷ್ಟಲಿಂಗವೊಂದನ್ನು ಧರಿಸುತ್ತೇವೆ ನೋಡೆಂದು ಹೇಳಿ ಆ ಪರಮಪವಿತ್ರವಾದ ಲಿಂಗವನ್ನು

ಶಿಶುವಿನ ಕಂಠದಲ್ಲಿ ಧರಿಸಿ ಚಿನ್ಮಯದೀಕ್ಷೆಯನ್ನು ಪೂರ್ತಿಮಾಡಿ ಆ ಮಗುವ ನ್ನೆತ್ತಿ ಮುದ್ದಾಡಿ ನಾದರಸನ ಕೈಕ್ಕೆ ಕೊಟ್ಟು ಅಯ್ಯಾ ನಾದರಸನೇ! ಈ ಇಷ್ಟಲಿಂಗವು ನಿನ್ನ ಮಗನ ಇಷ್ಟಾರ್ಥಸಿದ್ಧಿಗಳನ್ನು ಕೊಡುವ ವಸ್ತುವಾ ಗಿದೆ. ಇದನ್ನು ಅಂಗಸೂತ್ರವು ಕೆಡದಂತೆ ಒಂದು ಗದ್ದುಗೆಯಮೇಲಿಟ್ಟು ವಿಧಿವತ್ತಾಗಿ ಪೂಜಿಸಿ ಅನಂತರ ಈ ಲಿಂಗಕ್ಕೆ ನಿವೇದಿಸಿದ ಪದಾರ್ಥಗಳ ನ್ನೇ ಈ ಮಗುವಿಗೆ ಕೊಡಬೇಕಲ್ಲದೆ ಬೇರೆ ಯಾವ ಪದಾರ್ಥಗಳನ್ನೂ ಕೊಡ ಕೂಡದು. ಕೊಟ್ಟರೆ ಈತನ ಸ್ಥಿತಿಗತಿಗಳೆಲ್ಲಾ ಪೂರ್ವದಂತೆಯೇ ಕೆಡು ವುವು. ಈತನು ಹಿಂದೆ ಆರು ಅವತಾರಗಳನ್ನು ಮಾಡಿ ಏಳನೆಯ ಅವ ತಾರವನ್ನು ಪೂರ್ತಿಮಾಡುವುದಕ್ಕೋಸ್ಕರ ನಿಮ್ಮಲ್ಲಿ ಜನಿಸಿರುವನು. ಅದು ದರಿಂದ ಎಚ್ಚರಿಕೆಯಾಗಿರಬೇಕು. ಈಗ ನಾವು ಕೊಟ್ಟಿರುವ ಭಸ್ಮವನ್ನು ಧರಿಸಬೇಕಲ್ಲದೆ ಬೇರೆ ಭಸ್ಮವನ್ನು ಧರಿಸಕೂಡದು ಎಂದು ಆಜ್ಞಾಪಿಸಿ ಕಪ್ಪಡಿಗೆ ದಯಮಾಡಿಸಿದರು."

ಆ ಕಪ್ಪಡಿಕ್ಷೇತ್ರವು ಈಗ ವಿಜಾಪುರ ಜಿಲ್ಲೆಗೆ ಸೇರಿದ್ದಾಗಿದೆ. ಇದಕ್ಕೆ ಕೂಡಲಸಂಗಮ ಅಥವಾ ಸಂಗಮ ಎಂದು ಹೇಳುತ್ತಾರೆ. ಇದು ಹುನಗುಂದ ತಾಲ್ಲೂಕಿಗೆ ಸೇರಿದ್ದಾಗಿ ಹುನಗುಂದದಿಂದ ೯ ಮೈಲುಗಳ ದೂರದಲ್ಲಿದೆ. ಕೃಷ್ಣಾನದಿಗೆ ಮಲಾಪಹಾರಿ ನದಿಯು ಇದೇ ಸ್ಥಳದಲ್ಲಿ ಒಂದು ಕೂಡಿದೆ. ಆದುದರಿಂದಲೇ ಇದಕ್ಕೆ ಸಂಗಮ ಎಂಬ ಹೆಸರುಂ ಟಾಗಿ ಇದು ಮಹಾಪುಣ್ಯಕ್ಷೇತ್ರವಾಗಿ ಪರಿಣಮಿಸಿದೆ. ಈ ಉಭಯ ನದಿ ಗಳ ಸಂಗಮ ಸ್ಥಳದಲ್ಲಿಯೇ ಒಂದು ಮಹಾಲಿಂಗವಿದೆ. ಇದಕ್ಕೆ ಸಂಗ ಮೇಶ್ವರನೆಂದು ಹೇಳುತ್ತಿದ್ದಾರೆ ಈ ಮಹಾಲಿಂಗಕ್ಕೆ ಹೊಯ್ಸಳ ವಿಷ್ಣು ವರ್ಧನನ ಕಾಲದಲ್ಲಿದ್ದ (ಕ್ರಿ. ಶ. ೧೧೧೧–೧೧೪೧) ಪ್ರಸಿದ್ಧ ಶಿಲ್ಪಶಾಸ್ತ್ರ ಜ್ಞನಾದ ಜಕಣಾಚಾರ್ಯನು ಭವ್ಯವಾದ ಒಂದು ಶಿವಾಲಯವನ್ನು ಕಟ್ಟಿ ದ್ದಾನೆ. ಇದು ಮಹಾಪುಣ್ಯಕ್ಷೇತ್ರವಾಗಿಯೂ, ಅತ್ಯಂತ ಮನೋಹರ ವಾದ ಸ್ಥಳವಾಗಿಯೂ ಇರುವುದರಿಂದ ಜಾತವೇದಿಮುನಿಗಳು ಇಲ್ಲಿ

ಆಶ್ರಮವನ್ನು ಮಾಡಿಕೊಂಡು ಶಿಷ್ಯಸಮೂಹದೊಡನೆ ಬಹುಕಾಲವಾಸವಾಗಿ ದ್ದರೆಂಬುದು ಸಿಂಗಿರಾಜಪುರಾಣದ ಐದನೆಯಸಂಧಿಯಲ್ಲಿ ಈ ತಪಸ್ವಿಗಳ ವಿಷ ಯವಾಗಿ ಆಗಾಗ್ಗೆ ಉದಾಹರಿಸಲ್ಪಟ್ಟ ಸಂಗತಿಗಳಿಂದ ಸ್ಪಷ್ಟವಾಗುತ್ತದೆ.

ಈ ಜಾತವೇದಿಮುನಿಗಳು ತಮ್ಮ ನಡೆನುಡಿಗಳೆಲ್ಲವೂ ಆ ಸಂಗಮ ನಾಥನ ಪ್ರೇರಣೆಯಿಂದಲೇ ಜರುಗುತ್ತವೆಂಬ ದೃಢವಿಶ್ವಾಸವುಳ್ಳವರಾಗಿದ್ದ ರೆಂದುತೋರುತ್ತದೆ. ಆದಕಾರಣ ಶ್ರೀ. ಬಸವಣ್ಣನವರು ಕೂಡಾ ತಮ್ಮ ಗುರುಗಳ ಮಾರ್ಗವನ್ನೇ ಅನುಸರಿಸಿ ಕೂಡಲ ಸಂಗಮದೇವನನ್ನೇ ಧ್ಯಾನ ಮೂರ್ತಿಯಾಗಿಟ್ಟುಕೊಂಡಿದ್ದರು. ಜಾತವೇದಿಮುನಿಗಳು ಸಂಗಮೇಶ ನಿಗೂ ತಮಗೂ ಅಭಿನ್ನಭಾವನೆಯುಳ್ಳವರಾಗಿದ್ದುದನ್ನು ನೋಡಿ ಜನಗಳು ಇವರು ಸಾಕ್ಷಾತ್ ಸಂಗಮನಾಥನೆಂವೇ ನಂಬಿದುದರಲ್ಲಿ ಆಶ್ಚರ್ಯವೇನು? ಆದಕಾರಣ ಬಸವಪುರಾಣಾದಿ ಅನೇಕ ಗ್ರಂಥಗಳಲ್ಲಿ ಸಂಗಮನಾಥನೇ ಬಸ ವನಿಗೆ ಲಿಂಗಧಾರಣ ಮಾಡಿದನೆಂದು ಹೇಳಲ್ಪಟ್ಟಿದೆ.

ಜಾತವೇದಿಮುನಿಗಳು ಪರಮ ವೀರಶೈವರಾಗಿಯೂ, ಮಹಾಜ್ಞಾನಿ ಗಳಾಗಿಯೂ ಇದ್ದರು. ಆದುದರಿಂದಲೇ ಈ ಶಿಶುವು ಧರ್ಮಮೂರ್ತಿ ಯೆಂದು ತಿಳಿದು ಕ್ಷೀಣಿಸಿಹೋಗಿದ್ದ ಆ ವೀರಶೈವ ಮತವನ್ನು ಈತನಿಂದಲೇ ಉದ್ಧಾರಗೊಳಿಸಬೇಕೆಂದು ನಿರ್ಧರಿಸಿ ಆ ಕೂಸಿಗೆ ವೀರಶೈವಮತದೀಕ್ಷೆ ಯನ್ನು ಮಾಡಿದರು. ಇಷ್ಟೇ ಅಲ್ಲ ; ನಾವು ನಮ್ಮ ಇಷ್ಟಾರ್ಥವನ್ನು ಪೂರೈಸಿಕೊಳ್ಳುವುದಕ್ಕೋಸ್ಕರವಾಗಿ ಈ ಶಿಶುವಿಗೆ ಲಿಂಗಧಾರಣಮಾಡುತ್ತೇ ವೆಂದು ಅವರು ಸ್ಪಷ್ಟವಾಗಿ ಹೇಳಿರುವ ಸಂಗತಿಯಮೇಲಿಂದ ವೀರಶೈವ ಮತವನ್ನು ಪ್ರಸಾರಮಾಡುವುದೇ ಆ ಜಾತವೇದಿಮುನಿಗಳ ಉದ್ದೇಶವಾಗಿ ದ್ದಿತೆಂತಲೂ ಈ ಕಾರ್ಯವು ಆ ಶಿಶುವಿನಿಂದಲೇ ಮುಂದೆ ಜರುಗುವುದೆಂದು ಅವರು ಅರಿತುಕೊಂಡರೆಂತಲೂ ಸ್ಪಷ್ಟವಾಗುತ್ತದೆ. ಪೂರ್ವದಲ್ಲಿ ಜ್ಯೋ ತಿಷ್ಯ ಮತ್ತು ಸಾಮುದ್ರಿಕ ಶಾಸ್ತ್ರಗಳಲ್ಲಿ ಮಹಾಮಹಾ ವಿದ್ವಾಂಸರಿದ್ದ ರಷ್ಟೆ. ಆ ಶಾಸ್ತ್ರಗಳಮೇಲಿಂದ ಅಂತಹ ಜ್ಞಾನಿಗಳಿಗೆ ಆ ಮಗುವಿನ

ಭವಿಷ್ಯಸ್ಥಿತಿಯು ತಿಳಿದುದರಲ್ಲಿ ಆಶ್ಚರ್ಯವೇನು? ಭಗವಾನ್ ಗೌತಮ ಬುದ್ಧನು ಅವತರಿಸಿದಾಗ ಕಾಲಾಮುಖಋಷಿಯು ಬಂದು ಆ ಶಿಶುವಿನಲ್ಲಿರುವ ಲೆಳ ಲಕ್ಷಣಗಳನ್ನು ನೋಡಿ ಈತನು ಮುಂದೆ ಮಹಾಧರ್ಮೋಪದೇಶಕನಾಗುತ್ತಾನೆಂದು ಹೇಳಿ ಆತನ ಉಪದೇಶವನ್ನು ಕೇಳುವ ಭಾಗ್ಯವು ತನಗೆ ಮಾತ್ರ ಲಭಿಸುವುದಿಲ್ಲವೆಂದು ಶೋಕಿಸಿ ಆ ಶಿಶುವಿಗೆ ನಮಸ್ಕರಿಸಿ ಹೋಗಿರಲಿಲ್ಲವೇ? ಶ್ರೀ ರಾಮಕೃಷ್ಣಪರಮಹಂಸರು ಶ್ರೀ ಸ್ವಾಮಿ ವಿವೇಕಾನಂದರವರನ್ನು ಪೂರ್ವಾಶ್ರಮದಲ್ಲಿ ನೋಡಿದಾಗಲೇ ಈತನು ಧರ್ಮೋದ್ಧಾರಕನೆಂದು ತಿಳಿದು ಆತನಿಗೆ ಧರ್ಮೋಪದೇಶವನ್ನು ಮಾಡಲಿಲ್ಲವೇ? ಹಾಗೆಯೇ ಜಾತವೇದಿಮುನಿಗಳು ಕೂಡಾ ಶ್ರೀಮದ್ಬಸವನ ದಿವ್ಯತರವಾದ ಭವಿಷ್ಯಸ್ಥಿತಿಯನ್ನರಿತವರಾಗಿ ಆತನಿಗೆ ವೀರಶೈವದೀಕ್ಷೆಯನ್ನು ಮಾಡಿ ತಮ್ಮಾಶ್ರಮಕ್ಕೆ ಹೊರಟುಹೋದರು.

ಅಸಂಖ್ಯಜನಗಳು ಮಕ್ಕಳಿಗಾಗಿ ಅನೇಕ ಮಂತ್ರತಂತ್ರಗಳನು ಮಾಡಿಸಿ ನಾನಾಹರಕೆಗಳನ್ನು ಹೇಳಿಕೊಂಡು ಅನೇಕ ಅಪದ್ಧರೀತಿಗಳಿಂದ ನಡೆಯಲುಕೂಡಾ ಸಿದ್ಧರಾಗುತ್ತಿರುವಾಗ ಆ ಮಾದರಸ ಮತ್ತು ಮಾದಲಾಂಬಿಕೆಯರು ತಮ್ಮ ಮಗನಿಗೆ ಪ್ರಾಣದಾನವನ್ನೇ ಮಾಡಿದ ಆ ಜಾತವೇದಿ ಮುನಿಗಳ ಅಪ್ಪಣೆಯ ಪ್ರಕಾರ ಸದಾಚಾರಗಳನ್ನು ಆಚರಿಸುತ್ತಾ ಆ ಮಗುವನ್ನು ಸಂರಕ್ಷಿಸಿದ್ದರಲ್ಲಿ ಆಶ್ಚರ್ಯವೇನು? ಹನ್ನೆರಡನೆಯ ದಿವಸದಲ್ಲಿ ಆ ಮುನಿಗಳು ಆಜ್ಞಾಪಿಸಿದಂತೆ ಈ ಶಿಶುವಿಗೆ ಬಸವ ಎಂಬ ಹೆಸರನ್ನೇ ಇಟ್ಟು ಅವರ ಅಪ್ಪಣೆಯ ಪ್ರಕಾರ ಮಗನನ್ನು ಕಾಪಾಡುತ್ತಾ ಐದನೆಯ ವರ್ಷದಲ್ಲಿ ಬಸವನಿಗೆ ವಿದ್ಯಾಭ್ಯಾಸಮಾಡಿಸಲುಪಕ್ರಮಿಸಿದರು. ಆಗಲೇ ಈತನ ಅಸಾಧಾರಣವಾದ ಶೀಲಸ್ವಭಾವಗಳು, ಬುದ್ಧಿಶಕ್ತಿಯು ಗೊತ್ತಾದವು. ಬಸವನು ವಿದ್ಯಾಭ್ಯಾಸಮಾಡುತ್ತಿರುವಾಗ ತನ್ನ ಸಹಪಾಠಕರಲ್ಲಿ ಕೃಷ್ಣ ಎಂಬ ಒಬ್ಬ ಹುಡುಗನನ್ನು ಬಾವಿಯಲ್ಲಿ • ತಳ್ಳಿದನೆಂಬ ದೋಷಾರೋಪಣೆಯು ಈತನಮೇಲೆ ಬಂದಿದ್ದಿತೆಂತಲೂ ವಿಚಾರಾಂತದಲ್ಲಿ

ಬಸವನು ನಿರ್ದೋಷಿಯೆಂದು ಗೊತ್ತಾಯಿತೆಂತಲೂ ತೋರುತ್ತದೆ. ಈ ಸಂಗತಿಯನ್ನು ಬಾಗೇವಾಡಿಯಲ್ಲಿ ಈತನ ವಂಶಜರು ಈಗಲೂ ಹೇಳುತ್ತಿದ್ದಾರೆ. ಇವುಗಳ ವಿನಾ ಬಸವನ ಎಂಟನೆಯ ವರ್ಷದೊಳಗಿನ ಅನ್ಯ ಸಂಗತಿಗಳು ಗೊತ್ತಾಗುವುದಿಲ್ಲ. ಮಾದರಸನು ಮಗನಿಗೆ ಎಂಟುವರ್ಷಗಳಾಗಲು ಕುಲಪದ್ಧತಿಯ ಪ್ರಕಾರ ಉಪನಯನವನ್ನು ಮಾಡಬೇಕೆಂದು ನಿರ್ಧರಿಸಿ ತನ್ನ ಕುಲಪುರೋಹಿತರನ್ನೂ, ಆಚಾರ್ಯರನ್ನೂ ಬರಮಾಡಿಕೊಂಡು ಶುಭಮುಹೂರ್ತದಲ್ಲಿ ಈ ಉಪನಯನ ಸಮಾರಂಭವನ್ನು ಪ್ರಾರಂಭಿಸಿದಾಗ ನಡೆದ ಸಂಗತಿಯು ಸಿಂಗಿರಾಜಪುರಾಣದ ಐದನೆಯ ಸಂಧಿಯಲ್ಲಿ ವಿವರಿಸಲ್ಪಟ್ಟಿದೆ. ಅದರ ಮುಖ್ಯಾಂಶವೇನೆಂದರೆ:—

"ಪುರೋಹಿತರ ಮಾತುಗಳನ್ನು ಬಸವನು ಕೇಳಿ ಅವರನ್ನು ಕುರಿತು ಹೇಳಿದುದೇನೆಂದರೆ.—ನಮ್ಮ ಪೂರ್ವಾಚಾರ್ಯರು ನನಗೆ ಮಾಡಿರುವ ಕರ್ಮದಮೇಲೆ ನೀವು ಬೇರೆ ಕರ್ಮಗಳನ್ನು ಮಾಡಿ ಬೇರೆ ಗುರುವನ್ನೂ, ದೈವವನ್ನೂ ನನಗೆ ತೋರಿಸುತ್ತೀರಲ್ಲಾ ! ಇದನ್ನು ನಾನೆಂದಿಗೂ ಒಪ್ಪತಕ್ಕವನಲ್ಲ. ಆಗ ಪುರೋಹಿತರು, ಬಸವನೇ ಕೇಳು. ಗರ್ಭಾಧಾನವೇ ಮೊದಲಾದ ಷೋಡಶಕರ್ಮಗಳು ನೈಮಿತ್ತಿಕ ಕರ್ಮಗಳು. ಯಜನಾದಿ ಷಟ್ಕರ್ಮಗಳು, ತ್ರಿಸಂಧ್ಯಾವಂದನೆಗಳು, ಭೂತಾದಿಪಂಚಯಜ್ಞಗಳು, ಇವು ನಿತ್ಯಕರ್ಮಗಳು. ಸಪ್ತಪಾಕಯಜ್ಞ, ಸಪ್ತಹವಿರ್ಯಜ್ಞ, ಸಪ್ತ ಸೋಮಯಜ್ಞಗಳು ಕಾಮ್ಯ ಕರ್ಮಗಳು. ಬ್ರಾಹ್ಮಣನಾದವನಿಗೆ ಈ ನಿತ್ಯ ನೈಮಿತ್ತಿಕ, ಮತ್ತು ಕಾಮ್ಯಕರ್ಮಗಳು ಪ್ರಾಧಾನ್ಯವಾದವುಗಳಾಗಿವೆ. ಈ ಎಲ್ಲಾ ಕರ್ಮಗಳಿಗೂ ಈ ಉಪನಯನವೇ ಮೊದಲನೆಯ ಕರ್ಮವಾಗಿದೆ. ಈ ಮೊದಲನೆಯ ಕರ್ಮವನ್ನೇ ನೀನು ತಿರಸ್ಕರಿಸಿದರೆ ಬ್ರಹ್ಮಕರ್ಮಗಳ ಬಳಕಿಗೆ ನೀನು ಹೇಗೆತಾನೆ ಅರ್ಹನಾಗುವಿ? ಆ ಪುರೋಹಿತರ ಈ ಮಾತುಗಳನ್ನು ಕೇಳಿ ಬಸವದೇವನು ಹೇಳಿದುದೇನೆಂದರೆ— "ಏಕಮೇವಾದ್ವಿತೀಯ ಬ್ರಹ್ಮ" ಎಂಬ ಶ್ರುತಿಮತವನ್ನು ನಾನು

ಅನುಸರಿಸುವವನಾಗಿದ್ದೇನೆ. ಶ್ರುತಿಮತದ ನೆಲೆಯನ್ನೇ ಅರಿಯದ ಅಂಥ ಪಾರಂಪರಿಯಲ್ಲಿ ಜಾತ್ಯಾಂಧರೇ ಹುಟ್ಟುತ್ತಿದ್ದು ಒಂದಾನೊಂದುಕಾಲದಲ್ಲಿ ಅವರಲ್ಲಿ ಕಣ್ಣುಳ್ಳವನೊಬ್ಬ ಹುಟ್ಟಲು ಆಗ ಅವನು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು ಎಲಾ ! ತಾನು ಹುಟ್ಟುಕುರುಡರ ವಂಶ ದಲ್ಲಿ ಜನಿಸಿದಾತನಾಗಿರುವುದರಿಂದ ತಾನುಕೂಡಾ ಕಣ್ಣುಗಳನ್ನು ಮುಚ್ಚಿಕೊಂಡೇ ಇರಬೇಕೆಂದಪೇಕ್ಷಿಸುತ್ತಾನೆಯೇ ? ಎಲ್ಲಾ ಕರ್ಮ ಗಳಿಗೂ ಶ್ರೇಷ್ಠವಾದ ಅಪ್ರಾಕೃತ ಕರ್ಮಗಳು ನನಗಿರುವಾಗ ನಿಮ್ಮ ಪ್ರಾಕೃತ ಕರ್ಮಗಳು ನನಗೇತಕ್ಕೆ ? ಒಂದೇ ಜನ್ಮದಲ್ಲಿ ಭೋಗ ಮೋಕ್ಷಗಳೆರಡನ್ನೂ ಕೊಡುವ ಶಕ್ತಿವಿಶಿಷ್ಟಬ್ರಹ್ಮಕ್ಕೆ ನಮಸ್ಕರಿಸುವುದನ್ನು ಬಿಟ್ಟು ಒಂದು ಜನ್ಮದಲ್ಲಿ ಬರಿಯಭೋಗವನ್ನು, ಇನ್ನೊಂದು ಜನ್ಮದಲ್ಲಿ ಬರಿಯಮೋಕ್ಷವನ್ನು ಕೊಡುವ ಈ ಪ್ರಾಕೃತ ಬ್ರಹ್ಮಕ್ಕೆ ನಮಸ್ಕರಿಸುವುದು ವಿಹಿತವೇ ? ಆದಕಾರಣ ಈ ಉಪನಯನ ಸಂಸ್ಕಾರವು ನನಗೆ ಬೇಕಾಗಿಲ್ಲ.

ಈ ವಿವಾದವನ್ನು ಮಾದರಸನುಕೇಳಿ ಅಪ್ಪಾ ಮಗನೇ ! ನಿನಗೆ ಈ ಅದ್ವೈತವಾದವೇತಕ್ಕೆ ? ವೇದೋಕ್ತವಾಗಿರುವ ಈ ಕರ್ಮಗಳೆಲ್ಲವೂ ಪ್ರಚಾರದಲ್ಲಿರತಕ್ಕವುಗಳಾಗಿಲ್ಲವೇ ? ಎಂದು ಹೇಳಲು ಬಸವದೇವನು ತಂದೆಯೇ ? ಈ ನಿಮ್ಮ ಪ್ರಾಕೃತ ಸಂಸ್ಕಾರಗಳನ್ನು ಹೊಂದುವ ನಿಮ್ಮ ಬ್ರಾಹ್ಮಣರುಗಳ ಇಪ್ಪತ್ತೈದು ತತ್ವಗಳಿಂದ ಕೂಡಿದ ಶರೀರವೇ ಅಂಗವು. ಅದಕ್ಕೆ ದೀಕ್ಷಾಸಂಸ್ಕಾರವನ್ನು ಮಾಡಿ ಪಂಚಸೂತ್ರಘಟಿತವಾದ ಲಿಂಗ ದಲ್ಲಿ ಹನ್ನೊಂದು ತತ್ವಗಳನ್ನು ಸಂಯೋಜಿಸಿ ಆ ಲಿಂಗವನ್ನು ಅಂಗ ದಲ್ಲಿ ಧರಿಸಿ ಮೂವತ್ತಾರು ತತ್ವಗಳುಳ್ಳ ಲಿಂಗಾಂಗಿಯಾಗಿ ಶಿವಭಕ್ತಿ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗಸಾಮರಸ್ಯಗಳೆಂಬ ಅಪ್ರಾಕೃತ ಧರ್ಮಗಳನ್ನನುಸರಿಸಿ ಭಕ್ತಿ ಜ್ಞಾನ ವೈರಾಗ್ಯಗಳಿಂದ ತ್ಯಾಗಾಂ ಗ, ಯೋಗಾಂಗ, ಭೋಗಾಂಗಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳನ್ನು

ಪೂಜಿಸಿ ಇಹದಲ್ಲಿ ಲಿಂಗಾಂಗ ಸಾಮರಸ್ಯದ ಭೋಗವನ್ನೂ, ಪರದಲ್ಲಿ ಲವಣೋದಕ ಸಂಯೋಗದಂತಿರುವ ಸಕಲ ಸಾಯುಜ್ಯವನ್ನೂ, ಶಿಖಿ ಕರ್ಪೂರಯೋಗದಂತಿರುವ ಸಕಲ ನಿಷ್ಕಲ ಸಾಯುಜ್ಯವನ್ನೂ, ಮತ್ತು ಹರಿದ್ರಾಚೂರ್ಣಸಂಯೋಗದಂತಿರುವ ನಿಷ್ಕಲ ಸಾಯುಜ್ಯವನ್ನು ಹೊಂದು ವ ಅಪ್ರಾಕೃತ ಸಿದ್ಧಾಂತ ಮಾರ್ಗವನ್ನನುಸರಿಸಿ ನಡೆಯುವವನಿಗೆ ಈ ಪ್ರಾಕೃತ ಮಾರ್ಗವು ಓಕರಿಕೆಯಾಗುವುದಿಲ್ಲವೇ ? ಈಗ ನನಗಾದರೋ, ನನ್ನ ಗುರುವಾದ ಜಾತವೇದಿಮುನಿಗಳು ಕ್ರಿಯಾದೀಕ್ಷೆಯನ್ನು ಮಾಡಿ ನನಗೆ ಲಿಂಗಧಾರಣೆ ಮಾಡಿರುವುದು ನಿಮಗೆ ತಿಳಿದ ಸಂಗತಿಯೇ ಆಗಿದೆ. ಆದಕಾರಣ ಈ ಉಪನಯನ ಸಂಸ್ಕಾರವು ನನಗೆ ಖಂಡಿತವಾಗಿಯೂ ಬೇಡವೆಂದು ಬಸವನು ತಂದೆಗೂ ಹೇಳಿದನು."

ಆ ಉಪನಯನದ ಕಾಲವು ಶ್ರೀ ಬಸವಣ್ಣನವರ ಜೀವಿತ ದಲ್ಲಿ ಅತ್ಯಂತ ಮಹತ್ವದ ಕಾಲವಾಗಿದ್ದಿತು. ಆ ಸಮಯವು ವೀರಶೈವ ಮಹೋದ್ಧಾರದ ಪುಣ್ಯಕಾಲವಾಗಿದ್ದಿತು. ಆ ದಿನವು ಕರ್ನಾಟಕದ ಕ್ರಾಂತಿಯ ಪ್ರಥಮದಿನವಾಗಿದ್ದಿತು. ಆ ಮುಹೂ ರ್ತವು ಜಾತವೇದಿಮುನಿಗಳ ಇಷ್ಟಾರ್ಥವು ಪೂರ್ತಿಯಾಗುವ ಸುಮುಹೂರ್ತವಾಗಿದ್ದಿತು. ಆದುದರಿಂದಲೇ ಪರಮ ಸತ್ಯಾಗ್ರಹಿಯಾದ ಆ ಬಸವದೇವನು ತನ್ನ ಸತ್ಯವ್ರತವನ್ನು ಭ್ರಷ್ಟಗೊಳಿಸಲಿಲ್ಲ. ಸತ್ಯ ಕ್ಕೋಸ್ಕರವಾಗಿಯೇ ಹೇಗೆ ಪ್ರಹ್ಲಾದನು ತನ್ನ ತಂದೆಯ ಮಾತನ್ನು ಕೂಡಾ ನಿರಾಕರಿಸಿದನೋ ಹಾಗೆಯೇ ಬಸವದೇವನು ಕೂಡಾ ತನ್ನ ಸತ್ಯವ್ರತ ಕ್ಕೋಸ್ಕರ ತಂದೆಯ ಮಾತನ್ನೂ ಉಲ್ಲಂಘಿಸಿದನು. ಶ್ರೀ ರಾಮದಾಸ ಸ್ವಾಮಿಗಳು ವಿವಾಹದ ವಿಷಯದಲ್ಲಿ ಹೇಗೆ ಗುರುಹಿರಿಯರಮಾತುಗಳನ್ನು ಕೂಡಾ ನಿರಾಕರಿಸಿದರೋ ಹಾಗೆಯೇ ಶ್ರೀ ಬಸವದೇವನು ಮುಂಜಿಯ ವಿಷಯದಲ್ಲಿ ಪುರೋಹಿತರೇ ಮೊದಲಾದ ಹಿರಿಯರ ಸಲಹೆಗಳನ್ನು ತಿರಸ್ಕರಿಸಿದನು. ತಾಯಿತಂದೆಗಳನ್ನೂ, ಬಂಧುಬಳಗವನ್ನೂ, ಇಷ್ಟೇ

ಅಲ್ಲ ; ಹುಟ್ಟಿದ ಕುಲವನ್ನು ಸಹ ತಾನು ವಹಿಸಿದ್ದ ವ್ರತಕ್ಕೋಸ್ಕರ ಕೇವಲ ಎಂಟನೆಯ ವರ್ಷದಲ್ಲಿಯೇ ತ್ಯಜಿಸಿ ಅಸಾಧಾರಣವಾದ ಸತ್ಯ ನಿಷ್ಠೆಯನ್ನು ವ್ಯಕ್ತಗೊಳಿಸಿದ ಬಸವದೇವನೇ ಧನ್ಯನು ! ಇದೇ ಮಹಾತ್ಮರ ಮಾರ್ಗವು. ಅವರು ತಮ್ಮ ಸದಸದ್ವಿವೇಕ ಬುದ್ಧಿಗೆ ಸರಿ ತೋರಿದಂತೆ ನಡೆಯುತ್ತಾರೆಯೇವಿನಾ ತಾಯಿತಂದೆಗಳ ಮಾತಿಗಾಗಲಿ, ಗುರುಹಿರಿಯರ ಉಪದೇಶಕ್ಕಾಗಲಿ, ಶಾಸ್ತ್ರಾಧಾರಗಳಿಗಾಗಲಿ ಮನಸೋತು ತಮಗೆ ಅಸತ್ಯವಾಗಿ ತೋರುತ್ತಿರುವ ಮಾರ್ಗದಲ್ಲಿ ಎಂದೆಂದಿಗೂ ಹೋಗುವುದಿಲ್ಲ. ಆದುದರಿಂದಲೇ ಅವರು ಲೋಕಪೂಜ್ಯರಾಗುತ್ತಾರೆ.

ಬಸವನಿಗೆ ಎಂಟನೆಯ ವರ್ಷದಲ್ಲಿಯೇ ಇಂತಹ ಅದ್ವಿತೀಯವಾದ ಜ್ಞಾನೋದಯವಾಗಿ ಆತನು ಇಷ್ಟೆಲ್ಲಾ ಚರ್ಚೆಗಳನ್ನುಮಾಡಿ ಉಪನಯನ ಸಂಸ್ಕಾರವನ್ನು ತಿರಸ್ಕರಿಸಿರಬಹುದೇ ? ಎಂದು ಕೆಲವರು ಶಂಕಿಸಬಹುದು. ಆದರೆ ಅದು ವಿಹಿತವಲ್ಲ. ಏಕೆಂದರೆ, ಶ್ರೀ ಶಂಕರಾಚಾರ್ಯರು ಎಂಟುವರ್ಷಗಳು ತುಂಬುವುದರೊಳಗಾಗಿಯೇ ವೇದಾಂತಾದಿ ಶಾಸ್ತ್ರಗಳಲ್ಲಿ ಅಸಾಧಾರಣವಾದ ಪಾಂಡಿತ್ಯವನ್ನು ಹೊಂದಿ ಸನ್ಯಾಸ ಮಾರ್ಗಾವಲಂಬಿಗಳಾಗಿರಲಿಲ್ಲವೇ? ಜಾನ್‌ಸ್ಟುವರ್ಟ್ ಮಿಲ್‌ರವರು ಎಂಟನೆಯ ವರ್ಷದಲ್ಲಿಯೇ ಸ್ವಭಾಷೆಯಲ್ಲಿ ಪಂಡಿತರಾಗಿ ಗ್ರೀಕ್, ಲ್ಯಾಟಿನ್, ಭಾಷೆಗಳನ್ನು ಕೂಡಾ ಕಲಿತು ಮಹಾ ಬುದ್ಧಿಶಾಲಿಗಳಾಗಿರಲಿಲ್ಲವೇ ? ಇನ್ನೂ ಇಂತಹ ಅನೇಕ ದೃಷ್ಟಾಂತಗಳಿವೆ. ಆದುದರಿಂದ ಪ್ರಸಿದ್ಧ ಪುರುಷರ ಬಾಲ್ಯತ್ವವು ಜನಸಾಮಾನ್ಯರ ಬಾಲ್ಯತ್ವದಂತೆಯೇ ಇರುತ್ತದೆಂದು ಭಾವಿಸುವುದು ಯುಕ್ತವಲ್ಲ.

ಬಸವದೇವನು ಉಪನಯನವನ್ನು ತಿರಸ್ಕರಿಸಿದನಂತರ ತನ್ನ ಗುರುಗಳಾದ ಜಾತವೇದಿಮುನಿಗಳ ಬಳಿಗೆ ಹೋದನು. ಏಕೆಂದರೆ, ಅವರೇ ಅವನ ತಾಯಿ ತಂದೆಗಳಾಗಿಯೂ, ಬಂಧು ಬಳಗವಾಗಿಯೂ, ಗುರುಹಿರಿಯರಾಗಿಯೂ ಇದ್ದರು. ಬಸವನ ಈ ವೀರಸದ್ಭಕ್ತಿಯನ್ನು ತಾಯಿ ತಂದೆಗಳು

ನೋಡಿ ಸಂತೋಷಪಟ್ಟು ವೈರಾಗ್ಯವೀರನಾದ ಶಿವದೇವನ ಮಗಳಾದ ಅಕ್ಕ ನಾಗಮ್ಮನನ್ನು ಬಸವನ ಉಪಚಾರಕ್ಕೋಸ್ಕರ ಅಲ್ಲಿಟ್ಟು ತಮ್ಮ ಮನೆಗೆ ಬಂದರೆಂದು ಸಿಂಗಿರಾಜಪುರಾಣದ ಐದನೆಯ ಸಂಧಿಯ ಮೇಲಿಂದ ಗೊತ್ತಾಗುತ್ತದೆ. ಈ ಅಕ್ಕ ನಾಗಮ್ಮನು ಬಸವಣ್ಣನವರ ಅಕ್ಕನೆಂದು ಬಿಜ್ಜಳರಾಜನು ಹೇಳಿದ ವಿಷಯವು ಇದೇ ಪುರಾಣದ ೩೪ನೆಯ ಸಂಧಿಯಲ್ಲಿ ಉಕ್ತವಾಗಿದೆ. ಇದರ ಮೇಲಿಂದ ಬಸವಣ್ಣನವರು ಅಕ್ಕ ನಾಗಮ್ಮನು ತನ್ನ ಸಂಗಡ ಮೊದಲೇ ಕಪ್ಪಡಿಗೆಬಂದು ತನ್ನನ್ನು ಸಂರಕ್ಷಿಸುತ್ತಾ ಬಂದುದರಿಂದ ಅಕ್ಕನೆಂದೇ ಭಾವಿಸಿ ಆಪ್ರಕಾರ ಹೇಳುತ್ತಿದ್ದರೆಂದು ತೋರುತ್ತದೆ. ಆದುದರಿಂದ ಬಸವಪುರಾಣಾದಿ ಅನೇಕ ಗ್ರಂಥಗಳಲ್ಲಿ ಅಕ್ಕ ನಾಗಮ್ಮನು ಬಸವಣ್ಣನವರ ಸಹೋದರಿಯೆಂದು ಹೇಳಿದ್ದಾರೆ.

ಈ ಮಾದರಸನು ತನ್ನ ಮಗನು ಮಹಾ ಪೂಜ್ಯನೆಂದೇ ತಿಳಿದಿದ್ದನೆಂದು ಆತನ ವಂಶಜರು ಈವರೆಗೂ ಆಚರಿಸುತ್ತಿರುವ ಆಚರಣೆಗಳ ಮೇಲಿಂದ ವ್ಯಕ್ತವಾಗುತ್ತದೆ. ಬಾಗೇವಾಡಿಯಲ್ಲಿ ಈಗಲೂ ಆ ಮಾದರಸನ ವಂಶದ ಒಂದು ಕುಟುಂಬವಿದೆ. ಆ ಕುಟುಂಬದಲ್ಲಿ ಮಾದಪ್ಪನವರೆಂಬುವವರೂ ಇದ್ದಾರೆ. ಇವರು ಅಲ್ಲಿಯ ಕುಲಕರ್ಣಿಗಳು. ಇವರ ಮನೆತನದಲ್ಲಿ ನಂದೀಪ್ರತಿಮೆಗಳಿರುವ ಮಲ್ಲಿಕಾರ್ಜುನನ ಕಂಬಿಯನ್ನು ಪ್ರಾಚೀನಕಾಲದಿಂದಲೂ ಪೂಜಿಸುತ್ತಾ ಬಂದಿದ್ದಾರೆ. ಬಾಗೇವಾಡಿಯಿಂದ ಸಾಧಾರಣ ೪೫೦ ಮೈಲುಗಳ ದೂರದಲ್ಲಿರುವ ಶ್ರೀ ಶೈಲಕ್ಕೆ ಪ್ರತಿವರ್ಷ ಜಾತ್ರೆಗೆ ಇವರ ಮನೆಯಲ್ಲಿರುವ ಆ ಮಲ್ಲಯ್ಯನ ಕಂಬಿಯನ್ನು ಒಬ್ಬ ಮಾಹೇಶ್ವರರ ಸಂಗಡ ಕಳುಹಿಸುತ್ತಾರೆ. ಆಗ ಅವರಿಗೆ ಒಂದು ಹೊಸ ಹಚಡ, ಅಂಗಿ, ಮತ್ತು ಒಂದು ಜೊತಿ ಪಾದರಕ್ಷೆಗಳನ್ನು ಈ ಮನೆಯವರು ಕೊಡುತ್ತಾರೆ. ಇವುಗಳ ವಿನಾ ೧೫ ಎಕರೆ ಭೂಮಿಯನ್ನು ಈ ಮನೆತನದವರು ಆ ಮಾಹೇಶ್ವರರ ವಂಶಜರಿಗೆ ಪೂರ್ವಕಾಲದಲ್ಲಿಯೇ ಕೊಟ್ಟಿದ್ದಾರೆ. ಎಲ್ಲಾ ಕಂಬಿಗಳಿಗೆ ಕಾವಿ ಬಟ್ಟೆ ಯಿರು

ತ್ತದೆ. ಆದರೆ ಈ ಮಾದರಸನ ಮನೆಯ ಕಂಬಿಗೆಮಾತ್ರ ಬಿಳಿಯ ಬಟ್ಟೆಯಿರುತ್ತದೆ. ಇದಕ್ಕೆಮಾತ್ರ ಎಲ್ಲಿಯೂ ಸುಂಕವನ್ನು ಕೊಡಬೇಕಾಗುವುದಿಲ್ಲ. ಇಷ್ಟೇ ಅಲ್ಲ; ಆ ಶ್ರೀಶೈಲದ ಜಾತ್ರೆಯಲ್ಲಿ ಎಲ್ಲಾ ಕಂಬಿಗಳಿಗಿಂತಲೂ ಬಾಗೇವಾಡಿಯ ಈ ಕಂಬಿಯನ್ನೇ ಮೊದಲು ಬರಮಾಡಿಕೊಳ್ಳುತ್ತಾರೆ. ಆ ಮಾಹೇಶ್ವರರು ಜಾತ್ರೆಯನ್ನು ಪೂರೈಸಿಕೊಂಡು ಕಂಬಿಯನ್ನು ಊರಿಗೆ ತೆಗೆದುಕೊಂಡು ಬಂದನಂತರ ಈ ಮಾದರಸನ ಮನೆಯವರು ಅವರನ್ನು ವಾದ್ಯ ವೈಭವಗಳೊಡನೆ ಕರೆದುಕೊಂಡುಬಂದು ಆ ದಿವಸ ಪಂಚಗಣಾಧೀಶರ ಆರಾಧನೆಗೋಸ್ಕರ ಸಕಲ ಸಾಹಿತ್ಯಗಳನ್ನೂ ಕೊಟ್ಟು ಆ ಕಂಬಿಯನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಪ್ರತಿನಿತ್ಯ ಪೂಜಿಸುತ್ತಾರೆ. ಈ ಶೈವ ಬ್ರಾಹ್ಮಣರ ಕುಟುಂಬದವರಲ್ಲಿಯೇ ಕೆಲವರು ವೈಷ್ಣವರಾದುದರಿಂದ ಈಗ ಒಂದೇ ಒಂದು ಕುಟುಂಬದವರು ಮಾತ್ರ ಶೈವರಿದ್ದಾರೆ. ಈ ಮನೆತನದಲ್ಲಿ ಮಹಾರುದ್ರಪ್ಪನೆಂಬುವವರು ಮಹಾದೈವಭಕ್ತರಾಗಿದ್ದರು. ಇವರ ಸಮಾಧಿಯು ಬಸವನ ಭಾವಿಯ ಹತ್ತಿರಲೇ ಇದೆ.

ಬಾಗೇವಾಡಿಯಲ್ಲಿ ಈಗ ಸಾಧಾರಣ ೫ ಸಾವಿರ ಜನ ಸಂಖ್ಯೆಯಿದೆ. ಈ ಗ್ರಾಮವು ವಿಜಾಪುರ ಮಾರ್ಗದಲ್ಲಿರುವ ತೆಲಗಿ ಸ್ಟೇಷನ್ನಿನಿಂದ ೧೨ ಮೈಲುಗಳ ದೂರದಲ್ಲಿದೆ. ಇಲ್ಲಿ ಜಕಣಾಚಾರ್ಯರಿಂದ ಕಟ್ಟಲ್ಪಟ್ಟ ಮಹಾ ಶಿವಾಲಯವಿದೆ. ಜಾತವೇದಿ ಮುನಿಗಳು ಬಂದು ಕುಳಿತಿದ್ದ ಈ ಶಿವಾಲಯದಲ್ಲಿಯೇ ಮಾದಲಾಂಬಿಕೆಯು ನಂದೀವ್ರತವನ್ನಾಚರಿಸಿ ಪೂಜಿಸಿದ ಭವ್ಯವಾದ ನಂದೀವಿಗ್ರಹವೂ ಇದೆ. ಈಗ ಆ ಶಿವಾಲಯಕ್ಕೆ ಬಸವಣ್ಣನ ಗುಡಿಯೆಂದು ಹೇಳುತ್ತಿದ್ದಾರೆ. ಅಲ್ಲಿಯ ಪೂಜೆಯು ವೀರಶೈವರಿಂದಲೇ ನಡೆಯುತ್ತಲಿದೆ. ಆ ದೇವರಿಗೆ ಅಲ್ಲಿಯ ಎಲ್ಲಾ ಮತೀಯರೂ ನಡೆದುಕೊಳ್ಳುತ್ತಿದ್ದಾರೆ.

ಬಸವದೇವನು ಈ ಬಾಗೇವಾಡಿಯನ್ನು ಬಿಟ್ಟು ತಾಯಿ ತಂದೆಗಳನ್ನು ತೊರೆದು ಕಪ್ಪಡಿಕ್ಷೇತ್ರಕ್ಕೆ ಹೋಗಿ ತನ್ನ ಪರಮ ಗುರುಗಳಾದ

ಜಾತವೇದಿಮುನಿಗಳಲ್ಲಿ ನಾನಾ ಶಾಸ್ತ್ರಗಳನ್ನು ಕಲಿಯಲಾರಂಭಿಸಿದನು ಆ ಶ್ರೇಷ್ಠತರವಾದ ಗುರುಕುಲದಲ್ಲಿ ಈ ಅದ್ವಿತೀಯ ಮೇಧಾವಿಯಾದ ಬಸವದೇವನು ಸಾಧಾರಣ ೧೮ ವರ್ಷ ವಾಸವಾಗಿದ್ದರೂ ಆ ದೀರ್ಘಕಾಲದಲ್ಲಿ ನಡೆದ ಯಾವ ಸಂಗತಿಗಳೂ ಗೊತ್ತಾಗಲವಕಾಶವೇ ಇಲ್ಲದಿರುವುದು ಅತ್ಯಂತ ವಿಷಾದದ ಸಂಗತಿಯಾಗಿದೆ. ಈ ಮಧ್ಯದಲ್ಲಿ ಒಂದುವರ್ಷ ಕಪಿಲಾಷಷ್ಠಿಯೋಗವು ಪ್ರಾಪ್ತವಾಗಲು ಆ ಕಪ್ಪಡಿಕ್ಷೇತ್ರಕ್ಕೆ ಬಹುದೂರದಿಂದ ಅಸಂಖ್ಯಜನಗಳು ಬಂದಿದ್ದರು. ಆಗ ಬಸವದೇವನಿಗೂ, ಅಲ್ಲಿಗೆ ಬಂದಿದ್ದ ಅನೇಕ ಶೈವ ಬ್ರಾಹ್ಮಣರಿಗೂ, ಶಿವಪೂಜಾವಿಧಾನದ ವಿಷಯದಲ್ಲಿ ಅನೇಕ ವಾದಗಳು ಜರುಗಲು ಬಸವದೇವನೇ ಜಯಶೀಲನಾಗಿ ಬಹು ಪ್ರಸಿದ್ಧಿಯನ್ನು ಹೊಂದಿದನು. ಈ ವಾರ್ತೆಯು ಯಾತ್ರಿಕ ಮುಖಾಂತರ ಕಲ್ಯಾಣಪಟ್ಟಣದಲ್ಲಿ ಮಂತ್ರಿಯಾಗಿದ್ದ ಮಾದಲಾಂಬಿಕೆಯ ಸಹೋದರನಾದ ಬಲದೇವನಿಗೆ ತಿಳಿಯಲು ಆತನು ತನ್ನ ಮಗಳಾದ ಗಂಗಾಂಬಿಕೆಯನ್ನು ತನ್ನ ಅಳಿಯನಾದ ಈ ಬಸವದೇವನಿಗೆ ಕೊಟ್ಟು ವಿವಾಹಮಾಡಬೇಕೆಂದು ನಿರ್ಧರಿಸಿ ಈ ಸಮಾಚಾರವನ್ನು ಕಪ್ಪಡಿಕ್ಷೇತ್ರದಲ್ಲಿದ್ದ ಜಾತವೇದಿಮುನಿಗಳಿಗೆ ಹೇಳಿ ಕಳುಹಿಸಿದನು. ಅನಂತರ ಅಲ್ಲಿ ನಡೆದ ಸಂಗತಿಗಳು ಸಿಂಗಿರಾಜಪುರಾಣದ ಆರನೆಯ ಸಂಧಿಯಲ್ಲಿ ಈ ಪ್ರಕಾರ ಉದಾಹರಿಸಲ್ಪಟ್ಟಿವೆ.—

"ಕಲ್ಯಾಣದಿಂದ ಬಲದೇವಮಂತ್ರಿಯ ಅಭಿಪ್ರಾಯದಂತೆ ಲಗ್ನಪತ್ರಿಕೆಯನ್ನು ತೆಗೆದುಕೊಂಡು ಕಪ್ಪಡಿಗೆಬಂದು ಮೃಡಮೂರ್ತಿಗಳಾದ ಜಾತವೇದಿಮುನಿಗಳನ್ನು ಕಂಡು ನಮಸ್ಕರಿಸಿ ಆ ಲಗ್ನಪತ್ರಿಕೆಯನ್ನು ಕೊಡಲು ಅವರು ನೋಡಿ ಬಸವನಕಡೆಗೆ ಕೊಟ್ಟರು. ಅದನ್ನು ಬಸವನು ನೋಡಿ ಸ್ವಾಮಿಯೇ ? ನಿಮ್ಮ ಪಾದಸನ್ನಿಧಿಯನ್ನು ತಪ್ಪಿಸುವುದಕ್ಕೋಸ್ಕರ ಇದು ನನಗೆ ಬಂದಿರುವ ವಿಘ್ನಪತ್ರಿಕೆಯೆಂದು ಹೇಳಿದನು. ಆಗ ಜಾತವೇದಿಮುನಿಗಳು ಅಯ್ಯಾ ಬಸವನೇ ? ಅದು ಹಾಗಲ್ಲ.

ಮುಂದೆ ನಿನ್ನಿಷ್ಟಾರ್ಥವೆಲ್ಲವನ್ನೂ ಪೂರ್ತಿಮಾಡುವುದಕ್ಕೋಸ್ಕರ ಸಂಗಮೇಶ್ವರನೇ ಅವರ ಅಂತರಂಗದಲ್ಲಿ ಪ್ರವೇಶಿಸಿ ಈ ರೀತಿಯಾದ ಆಜ್ಞೆಯನ್ನು ಮಾಡಿರುವನು. ಆದಕಾರಣ ನೀನು ಈ ನಿರೂಪಣವನ್ನು ಉಲ್ಲಂಘಿಸಬೇಡ. ಎಂದು ಹೇಳಲು ಬಸವನು ಗುರುಗಳಾಜ್ಞೆಯನ್ನು ಒಪ್ಪಿಕೊಂಡು ಕಲ್ಯಾಣಕ್ಕೆ ಹೋಗಲು ಸಿದ್ಧನಾದನು. ಆಗ ಜಾತವೇದಿಮುನಿಗಳು ಬಲದೇವ ಮಂತ್ರಿಯು ಕಳುಹಿಸಿಕೊಟ್ಟಿದ್ದ ಸದ್ಭಕ್ತಿಯುಕ್ತರ ಕೂಡ ಹೊರಗಣ ಆಚಾರವ್ಯವಹಾರಗಳನ್ನು ಮತ್ತು ಒಳಗಣಆಚಾರವ್ಯವಹಾರಗಳನ್ನು, ಆದಿ ಕುಲಾಚಾರಪದ್ಧತಿಗಳನ್ನು ಸಾಂಗವಾಗಿ ಮಾತನಾಡಿ ಅವರಿಗೆ ಎಲ್ಲವನ್ನು ಸ್ಪಷ್ಟವಾಗಿ ತಿಳುಹಿಸಿ ಪಂಚಗಣಾಧೀಶ್ವರರನ್ನು ಕರೆದು ನೀವು ನನ್ನ ಸಿದ್ಧಾಂತ ಪ್ರಕಾರವಾಗಿ ಆ ಗಂಗಾಂಬಿಕೆಗೆ ಶಿವದೀಕ್ಷಾಸಂಸ್ಕಾರವನ್ನು ಮಾಡಿ ಅನಂತರ ಕ್ರಮವಾಗಿ ವಿವಾಹ ಮಾಡಬೇಕೆಂದು ಅಜ್ಞಾಪಿಸಿ ಅವರ ಸಂಗಡ ಲಿಂಗಜಂಗಮ ಪ್ರಾಣಿಯಾದ ಅಕ್ಕ ನಾಗಮ್ಮನನ್ನು ಕಲ್ಯಾಣಪಟ್ಟಣಕ್ಕೆ ಕಳುಹಿಸಿಕೊಟ್ಟರು."

---

## ಮೂರನೆಯ ಪ್ರಕರಣ.

## ವಿವಾಹ ಮತ್ತು ಅಧಿಕಾರಪ್ರಾಪ್ತಿ.

ಬಹು ರಮಣೀಯವಾಗಿಯೂ, ಅತ್ಯಂತ ಫಲವತ್ತಾಗಿಯೂ, ಇರುವ ಈ ಪರಮ ಪವಿತ್ರವಾದ ಕರ್ನಾಟಕ ದೇಶವನ್ನಾಳಿದ ರಾಜರುಗಳಲ್ಲಿ ಕಲ್ಯಾಣದ ಚಾಲುಕ್ಯರೂ ಮಹಾ ಪ್ರತಾಪಶಾಲಿಗಳೇ ಆಗಿದ್ದರು. ಆ ವಂಶದಲ್ಲಿ **ಮೊದಲನೆಯ ಸೋಮೇಶ್ವರ (ಆಹವಮಲ್ಲ—ತ್ರೈಲೋಕ್ಯಮಲ್ಲ)** ನೆಂಬ ರಾಜನು ಬಹು ಪರಾಕ್ರಮಶಾಲಿಯಾಗಿದ್ದನು. ಈತನೇ ಇತಿಹಾಸ ಪ್ರಸಿದ್ಧವಾದ ಕಲ್ಯಾಣಪಟ್ಟಣವನ್ನು ಕಟ್ಟಿಸಿ ಕ್ರಿ. ಶ. ೧೦೪೦ರಿಂದ ೧೦೬೯ ರವರೆಗೆ ಪ್ರಭುತ್ವವನ್ನು ಮಾಡಿದನು. ಈ ಕಲ್ಯಾಣಪಟ್ಟಣವು ಆ ಕಾಲದಲ್ಲಿ ಬಹು ಘನವಾದುದಾಗಿಯೂ ಮಹಾ ವೈಭವಾತಿಶಯವುಳ್ಳದ್ದಾಗಿಯೂ ಇದ್ದಿತು. ಈ ಪಟ್ಟಣದಲ್ಲಿ ಪ್ರಭುತ್ವವನ್ನು ಮಾಡಿದ ಚಾಲುಕ್ಯ ವಿಕ್ರಮಾರ್ಕನ ರಾಜಸಭೆಯಲ್ಲಿದ್ದ ವಿಜ್ಞಾನೇಶ್ವರನು ಕಲ್ಯಾಣ ಪಟ್ಟಣವನ್ನು ಕುರಿತು ಹೇಳಿರುವುದೇನೆಂದರೆ:—

ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂಪುರಂ ।

“ ಕಲ್ಯಾಣದಂತಹ ಪಟ್ಟಣವು ಪ್ರಪಂಚದಲ್ಲಿ ಹಿಂದಕ್ಕಿರಲಿಲ್ಲ; ಈಗ ಇಲ್ಲ; ಮುಂದೆ ಇರುವುದಿಲ್ಲ. ” ಈಗಲೂ ಆ ಪಟ್ಟಣದಿಂದ ೯-೧೦ ಮೈಲುಗಳ ದೂರದಲ್ಲಿರುವ ಆ ರಾಜಧಾನಿಯ ಗತವೈಭವದ ಗುರುತುಗಳನ್ನು ನೋಡಿದರೆ ವಿಜ್ಞಾನೇಶ್ವರನ ಅಭಿಪ್ರಾಯವು ಅಷ್ಟು ಅತ್ಯುಕ್ತಿಯಾದುದೆಂದು ಹೇಳಲಿಕ್ಕಾಗುವುದಿಲ್ಲ. ಕಲ್ಯಾಣದ ಚಾಲುಕ್ಯರು

ಸಾಧಾರಣ ಒಂದು ಶತಮಾನದವರೆವಿಗೂ ಇಂತಹ ಶ್ರೇಷ್ಠತರವಾದ ರಾಜಧಾನಿಯಲ್ಲಿ ಕರ್ನಾಟಕದ ಸಾರ್ವಭೌಮರಾಗಿ ಆಳಿದನಂತರ ಕ್ರಿ. ಶ. ೧೧೫೦ರಲ್ಲಿ ಪಟ್ಟಕ್ಕೆಬಂದ ಈ ವಂಶದ ೨ ನೆಯ ತೈಲಪನು ನಿರ್ಬಲನಾಗಲು ಈತನ ಮಾಂಡಲಿಕರಲ್ಲೊಬ್ಬನಾದ ಬಿಜ್ಜಳನು ಈತನನ್ನು ಓಡಿಸಿದನು. ಆಗ ತೈಲಪನು ಕಲ್ಯಾಣವನ್ನು ಬಿಟ್ಟು ಅಣ್ಣಿಗೇರಿಗೆಬಂದು ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಬಿಜ್ಜಳನು ಅಲ್ಲಿಂದಲೂ ಆತನನ್ನು ಓಡಿಸಲು ಕೊನೆಗೆ ಬನವಾಸಿಗೆ ಆತನು ಹೋಗಬೇಕಾಯಿತು. ಆಗ ಬಿಜ್ಜಳನು ಆ ಚಾಲುಕ್ಯರ ಸಿಂಹಾಸನವನ್ನಾಕ್ರಮಿಸಿಕೊಂಡು ಕ್ರಿ. ಶ. ೧೧೫೬ರಿಂದ ಕರ್ನಾಟಕದ ಸಾರ್ವಭೌಮನಾಗಿ ಕಲ್ಯಾಣಪಟ್ಟಣದಲ್ಲಿ ಪ್ರಭುತ್ವವನ್ನು ಮಾಡಲುಪಕ್ರಮಿಸಿದನು. ಈತನಿಗೆ ಕಶ್ಯಪ ನೆಂಬ ಮುಖ್ಯಾಧಿಕಾರಿಯು (ವೈಸ್ರಾಯ್), ಬಲದೇವನೇ ಮೊದಲಾದ ಮಂತ್ರಿಗಳು ರಾಜ್ಯಕಾರ್ಯ ನಿರ್ವಾಹಕರಾಗಿದ್ದರು.

ಶ್ರೀ ಜಾತವೇದಿಮುನಿಗಳಿಂದ ಕಳುಹಿಸಲ್ಪಟ್ಟ ಬಸವದೇವನೆ ಮೊದಲಾದವರು ವಿವಾಹಕ್ಕೋಸ್ಕರ ಕಪ್ಪಡಿಕ್ಷೇತ್ರದಿಂದ ಹೊರಟು ಸಾಧಾರಣ ೧೦೦ ಮೈಲುಗಳ ದೂರದಲ್ಲಿದ್ದ ಕಲ್ಯಾಣಪಟ್ಟಣಕ್ಕೆ ಬರಲು ಬಲದೇವ ಮಂತ್ರಿಯು ಇವರನ್ನು ಮಹಾ ಸಂಭ್ರಮದಿಂದ ಇದಿರುಗೊಂಡು ಅರಮನೆಯ ಧಾನ್ಯದ ಮುಖ್ಯಾಧಿಕಾರಿಯಾಗಿದ್ದ ಸೊಡ್ಡಳಬಾಚರಸನ ಮನೆಯಲ್ಲಿರಿಸಿದನು. ಅನಂತರ ಶುಭಮುಹೂರ್ತದಲ್ಲಿ ವಿವಾಹಕಾರ್ಯವು ಅತ್ಯಂತ ಸಂಭ್ರಮದಿಂದ ಪ್ರಾರಂಭವಾಗಲು ಜಾತವೇದಿಮುನಿಗಳ ಅಪ್ಪಣೆಯಪ್ರಕಾರ ಗಂಗಾಂಬಿಕೆಗೆ ಆ ಪಂಚಗಣಾಧೀಶರು ದೀಕ್ಷೆಯನ್ನು ಮಾಡಿದರು. ಆಮೇಲೆ ನಾಲ್ಕುದಿವಸಗಳವರೆಗೆ ವಿವಾಹವು ಬಹು ವೈಭವದಿಂದ ಸಾಗಿತು. ಬಲದೇವಮಂತ್ರಿಯು ಮಗಳಿಗೆ ಅನೇಕ ವಸ್ತುವಾಹನ ಧನ ಧಾನ್ಯಾದಿಗಳನ್ನು ಬಳುವಳಿಯಾಗಿಕೊಟ್ಟು ಅವಳನ್ನು ಅಳಿಯನಾದ ಬಸವದೇವನ ಮನೆಗೆ (ಬಾಚರಸನಮನೆಗೆ) ಕಳುಹಿಸಿಕೊಟ್ಟನು.

ಚೆನ್ನಬಸವದೇವನೂ ಆ ಪಂಚಗಣಾಧೀಶರ ಸಂಗಡಲೇ ಬಸವದೇವನ ವಿವಾಹಕ್ಕೆ ಬಂದಿದ್ದನೆಂದು ತೋರುತ್ತದೆ. ಏಕೇ ದರೆ, ಬಸವ ದೇವನಿಗೆ ಮುಂದೆ ಮತಪ್ರಸಾರಕಾರ್ಯಕ್ಕೆ ಈತನೇ ಮುಖ್ಯ ಸಹಾಯಕನಾಗಿದ್ದನು. ಬಸವದೇವನ ವಿವಾಹಕಾಲದಲ್ಲಿ (ಕ್ರಿ. ಶ. ೧೧೫೭ ಆತನಿಗೆ ೨೫ ವರ್ಷಗಳು, ಚೆನ್ನಬಸವದೇವನಿಗೆ ೧೩ ವರ್ಷಗಳು ಆಗಿದ್ದ ವೆಂದು ಹೇಳಬಹುದು. ಈ ಉಭಯರೂ ಮುಂದೆ ಹನ್ನೊಂದು ವರ್ಷ ಮಾತ್ರ ಆ ಕಲ್ಯಾಣಪಟ್ಟಣದಲ್ಲಿದ್ದರು. ಬಿಜ್ಜಳರಾಜನು ಕ್ರಿ. ಶ. ೧೧೬೮ ರಲ್ಲಿ ಕೊಲ್ಲಲ್ಪಟ್ಟನಂತರ ಚೆನ್ನಬಸವಣ್ಣನವರೂ, ಮತ್ತು ಕೊಲ್ಲಲ್ಪಡುವ ಪೂರ್ವದಲ್ಲಿ ಬಸವಣ್ಣನವರೂ ಕಲ್ಯಾಣವನ್ನು ಬಿಟ್ಟು ಹೋಗಿದ್ದಾರೆ. ಆ ಕಾಲಕ್ಕೆ ಚೆನ್ನಬಸವಣ್ಣನವರಿಗೆ ೨೪ ವರ್ಷಗಳಾಗಿದ್ದವು.

ಈ ಪ್ರಕಾರ ತಿಳಿಯದೆ ಈಗ ಅನೇಕ ಗ್ರಂಥಗಳಲ್ಲಿರುವಂತೆ ಬಸವ ಣ್ಣನವರು ಮತ್ತು ಅಕ್ಕನಾಗಮ್ಮನವರು ಕಲ್ಯಾಣಕ್ಕೆ ಬಂದನಂತರವೇ ಚೆನ್ನಬಸವದೇವನು ಜನ್ಮವೆತ್ತಿದನೆಂಬುದನ್ನು ನಂಬುವುದಾದರೆ ಚೆನ್ನಬಸವ ಣ್ಣನವರ ಜೀವಿತವೆಲ್ಲಾ ಹತ್ತೇವರ್ಷಗಳೆಂದು ಹೇಳಬೇಕಾಗುತ್ತದೆ. ಇದು ಶುದ್ಧ ಅಸಂಗತವಾದುದೇಸರಿ. ಏಕೆಂದರೆ, ಚೆನ್ನಬಸವಣ್ಣನವರು ಕಲ್ಯಾ ಣವನ್ನು ಬಿಟ್ಟು ಹೋಗುವಾಗ ಪ್ರೌಢರಾಗಿದ್ದರೆಂದೇ ಸ್ಪಷ್ಟವಾಗಿ ಎಲ್ಲಾ ಗ್ರಂಥಗಳಲ್ಲಿಯೂ ಹೇಳಲ್ಪಟ್ಟಿದೆ. ಅಲ್ಲದೆ ಆದಿಯಿಂದಲೂ ಮತಪ್ರಸಾರ ಕಾರ್ಯಕ್ಕೆ ಚೆನ್ನಬಸವಣ್ಣನವರು ಬಸವಣ್ಣನವರಿಗೆ ಸಹಾಯಕರಾಗಿಯೇ ಇದ್ದರು. ಇಷ್ಟೇ ಅಲ್ಲ; ಪ್ರಭುದೇವರನಂತರ ಆ ಕಲ್ಯಾಣದ ಶೂನ್ಯ ಸಿಂಹಾಸನಕ್ಕೆ ಈ ಚೆನ್ನಬಸವಣ್ಣನವರೇ ಅಧಿಪತಿಗಳಾಗಿದ್ದರು. ಮತ್ತು ಬಸವಣ್ಣನವರ ತರುವಾಯ ಇವರು ಬಿಜ್ಜಳರಾಜನ ಮಂತ್ರಿಗಳಾಗಿಯೂ ಇದ್ದರು. ಇವರು ಷಟಸ್ಥಳವಚನ, ಕಾಲಜ್ಞಾನವಚನ, ಮಂತ್ರಗೋಪ್ಯ ಕರಣಹಸುಗೆ, ಮಿಶ್ರಾರ್ಪಣ ಎಂಬ ಗ್ರಂಥಗಳನ್ನೂ ರಚಿಸಿದ್ದಾರೆ. ಇಂಥವರ ಜೀವಿತಕಾಲವೆಲ್ಲಾ ಹತ್ತೇವರ್ಷ ವೆಂದು ಹೇಳುವುದು

ಯುಕ್ತವೇ ? ಆದುದರಿಂದ ಶ್ರೀಯುತ ಎಸ್. ಕೃಷ್ಣಸ್ವಾಮಿ ಅಯಂಗಾರ್ಯರೇ ಮೊದಲಾದ ಕೆಲವರು ಚೆನ್ನಬಸವನು ಬಸವನ ಸಹೋದರಿಯಲ್ಲಿ ಬಿಜ್ಜಳರಾಜನಿಂದ ಜನಿಸಿದನೆಂದು ಬರೆದಿರುವುದು ಅನುಚಿತವಾದುದೆಂದು ಸ್ಪಷ್ಟವಾಗುವುದಿಲ್ಲವೇ ? ಇಷ್ಟೇ ಅಲ್ಲ ; ಚೆನ್ನಬಸವಣ್ಣನವರು ಕಲ್ಯಾಣದಲ್ಲಿ ಜನ್ಮವೆತ್ತಿದರೆಂದು ಬಸವಪುರಾಣಾದಿಗ್ರಂಥಗಳಲ್ಲಿ ಹೇಳಿರುವುದು ಕೂಡಾ ಅಸಮಂಜಸವಾದುದೆಂದೇ ಸಿದ್ಧವಾಗುತ್ತದೆ. ಆದಕಾರಣ ಚೆನ್ನಬಸವದೇವನು ಕಲ್ಯಾಣದಲ್ಲಿ ಜನ್ಮವೆತ್ತದೆ ಬಸವದೇವನ ಸಂಗಡಲೇ ಆತನು ಕಲ್ಯಾಣಕ್ಕೆ ಹೋಗಿದ್ದನೆಂತಲೂ ಆಗ ಆತನಿಗೆ ೧೩-೧೪ ವರ್ಷಗಳಾಗಿದ್ದವೆಂತಲೂ ತಿಳಿಯುವುದೇ ವಿಹಿತವಾಗಿಲ್ಲವೇ ?

ಬಸವದೇವನ ವಿವಾಹಕ್ಕೆ ಹೋಗಿದ್ದ ಆ ಪಂಚಗಣಾಧೀಶರಲ್ಲಿಯೇ ಅಕ್ಕನಾಗಮ್ಮನವರ ಪತಿಯಾದ ಶಿವಸ್ವಾಮಿಗಳೂ ಒಬ್ಬರಾಗಿದ್ದರೆಂದು ತೋರುತ್ತದೆ. ಏಕೆಂದರೆ, ಮೊದಲಿನಿಂದಲೂ ಅಕ್ಕನಾಗಮ್ಮನವರು ಬಸವಣ್ಣನವರ ಸಂಗಡಲೇ ಇದ್ದಾರೆ. ಆದಕಾರಣ ಅವರ ಪತಿಯಾದ ಶಿವಸ್ವಾಮಿಗಳೂ ಬಸವಣ್ಣನವರ ಸಂಗಡಲೇ ಇದ್ದರೆಂದು ತಿಳಿಯುವುದು ವಿಹಿತವಾಗಿದೆ. ಈ ವಿಷಯವಾಗಿ ಸಿಂಗಿರಾಜ ಪುರಾಣದ ೩೧ ನೆಯ ಸಂಧಿಯಲ್ಲಿ ಉಕ್ತವಾಗಿರುವುದೇನೆಂದರೆ:—

“ ದುರ್ಮಂತ್ರಿಗಳು ರಾಜಾಜ್ಞಾಪ್ರಕಾರ ಬಸವಣ್ಣನವರಸಂಗಡಲೇ ಅಕ್ಕನಾಗಮ್ಮನವರನ್ನು, ಅವರ ಪತಿಯಾದ ಶಿವಸ್ವಾಮಿಗಳನ್ನು, ಮತ್ತು ಚೆನ್ನಬಸವಣ್ಣನವರನ್ನು ಅವರಿಗೆ ಒಂದೊಂದು ಜೀರ್ಣವಸ್ತ್ರವನ್ನು ಕೊಟ್ಟು ಅರಮನೆಯಿಂದ ಹೊರಡಿಸಿದರು. ”

ಇದರ ಮೇಲಿಂದ ಅಕ್ಕನಾಗಮ್ಮನವರು ಮತ್ತು ಅವರ ಪತಿಯಾದ ಶಿವಸ್ವಾಮಿಗಳು ಬಸವಣ್ಣನವರಸಂಗಡಲೇ ಇರುತ್ತಿದ್ದರೆಂಬುದು ಸ್ಪಷ್ಟವಾಗುವುದಿಲ್ಲವೇ ? ಆದಕಾರಣ ಬಸವದೇವನ ವಿವಾಹವಾದಮೇಲೆ ಆತನ ಸಂಗಡ ಗಂಗಾಂಬಿಕೆ, ಅಕ್ಕನಾಗಮ್ಮ, ಶಿವಸ್ವಾಮಿಗಳು, ಮತ್ತು ಚೆನ್ನಬಸ

ವದೇವ ಇವರೆಲ್ಲಾ ಕೂಡಿಯೇ ಸೊಡ್ಡಾಳ ಬಾಚರಸನ ಮನೆಯಲ್ಲಿದ್ದರೆಂದು ಸ್ಪಷ್ಟವಾಗುತ್ತದೆ. ಬಸವದೇವನು ಈ ಪ್ರಕಾರ ಕಲ್ಯಾಣದಲ್ಲಿ ಸುಖದಿಂದಿರುವಾಗ ಆತನ ಮಾವನಾದ ಬಲದೇವಮಂತ್ರಿಯು ಪರಲೋಕವಾಸಿಯಾದನು. ಅನಂತರ ಬಸವದೇವನು ತನ್ನ ಪತ್ನಿಯನ್ನು ಕುರಿತು ಈ ಪ್ರಕಾರ ಹೇಳಿದನೆಂದು ಸಿಂಗಿರಾಜಪುರಾಣದ ಆರನೆಯ ಸಂಧಿಯಲ್ಲಿ ಉಕ್ತವಾಗಿದೆ.

"ನೀನು ಮಾಡುವ ಗುರುಲಿಂಗಜಂಗಮ ಸೇವೆಯು ಶಿವಪದವನ್ನು ಸೇರತಕ್ಕದ್ದೇ ಆಗಿದೆ. ಆದರೆ ಈ ನಮ್ಮ ದಾಸೋಹಸೇವೆಗೆ ಸರಿಯಾದ ಕಾಯಕ (ಕೆಲಸ) ಒಂದಿಲ್ಲ. ಧನಧಾನ್ಯಸಂಪತ್ತುಗಳೆಲ್ಲಾ ಇವೆಯೆಂದು ನೀನು ಹೇಳಬಹುದು. ಆದರೆ ತಾನು ಗಳಿಸಿದ ಧನವೇ ಶುದ್ಧವಾದುದೆಂತಲೂ, ತಂದೆಯಿಂದ ಬಂದಧನವು ಮಧ್ಯಮವಾದುದೆಂತಲೂ, ಅನ್ಯರು ಸಂಪಾದಿಸಿದ ಹಣವು ಅಧಮವಾದುದೆಂತಲೂ, ಸ್ತ್ರೀ ಸಂಬಂಧದಿಂದ ಬಂದ ಹಣವಾದರೋ ಅಧಮಾಧಮವೆಂತಲೂ ಪೂಜ್ಯರಾದವರು ಹೇಳುತ್ತಿದ್ದಾರೆ. ಆದುದರಿಂದ ಉತ್ತಮರು ಅನ್ಯರ ಸ್ವತ್ತನ್ನು ಮುಟ್ಟುವುದೇ ಇಲ್ಲ. ಅವರು ಹೇಗೆ ಜೀವಿಸುತ್ತಾರೆಂದರೆ, ಅವರಿಗೆ ಕಾಯಕವೇ ಕೈಲಾಸವಾಗಿರುವುದು. ನಮಗೆ ಈಗ ಅರಮನೆಯ ಕರಣಶಾಲೆಯು (ಗುಮಾಸ್ತರ-ಕಾರಕೂನರ ಖಾತೆ) ಹೇಗಾದರೂ ನಮ್ಮದಾಗಿಯೇ ಇದೆ. ಅಲ್ಲಿ ಹೋಗಿ ಬರೆಯುವುದರಿಂದ ಅತಿ ವಿವೇಕವುಂಟಾಗುವುದಲ್ಲದೆ ರಾಜನು ಮನ್ನಿಸಿ ಧನಧಾನ್ಯಗಳನ್ನೂ ಕೊಡುತ್ತಾನೆ. ಅದು ನಮ್ಮದಾಸೋಹಕ್ಕೆ ಅನುಕೂಲವಾಗುತ್ತದೆ. ಇದೇ ಉತ್ತಮವಾದ ಧನವು. ಎಂದು ಹೇಳಿ ಕಾರಣಪುರುಷನಾದ ಬಸವನು ಕರಣಶಾಲೆಗೆ ಬರೆಯಲಿಕ್ಕೆ ಹೋದನು."

ಇದರಮೇಲಿಂದ ಬಸವದೇವನು ಮೊದಲು ರಾಜಸಭೆಯಲ್ಲಿ ಗುಮಾಸ್ತನಾಗಿ ಕೆಲಸಮಾಡಲುಪಕ್ರಮಿಸಿದನೆಂದು ತೋರುತ್ತದೆ. ಬಲದೇವಮಂತ್ರಿಯ ಅಳಿಯನಾಗಿದ್ದುದರಿಂದಲೂ, ಬಾಚರಸನ ಆಶ್ರಯದಲ್ಲಿದ್ದುದರಿಂದಲೂ, ಬಸವದೇವನು ಸ್ವತಃ ಮಹಾ ಬುದ್ಧಿಶಾಲಿಯಾಗಿದ್ದುದರಿಂದಲೂ,

ರಾಜಸಭೆಯಲ್ಲಿ ಗುಮಾಸ್ತನಾಗಿರುವುದೇನೋ ಆತನಿಗೆ ಅಸಾಧ್ಯವಾಗಿರ ಲಿಲ್ಲ. ಈ ಕೆಲಸವನ್ನು ಈತನು ಮಾಡುತ್ತಿರುವಾಗ ಸಕಲರಿಗೂ ಅಸಾಧ್ಯ ವಾದ ಒಂದು ಲಿಪಿಯನ್ನು ಬಸವದೇವನು ಓದಿದನೆಂತಲೂ ಆ ಮೂಲಕ ಬಿಜ್ಜಳರಾಜನಿಗೆ ವಿಶೇಷವಾದ ಐಶ್ವರ್ಯವು ದೊರೆತು ಬಸವದೇವನು ಬಹು ಪ್ರಸಿದ್ಧಿಗೆ ಬಂದನೆಂತಲೂ ಈತನ ಸಂಬಂಧವಾಗಿ ಬರೆಯಲ್ಪಟ್ಟ ಎಲ್ಲಾ ಗ್ರಂಥಗಳಲ್ಲಿಯೂ ಉಕ್ತವಾಗಿದೆ. ಆದುದರಿಂದ ಇದರಲ್ಲಿ ಏನಾದರೂ ಸತ್ಯಾಂಶವಿರಲೇಬೇಕು. ಈ ವಿಷಯವಾಗಿ ಸಿಂಗಿರಾಜಪುರಾಣದ ಆರು ಏಳನೆಯ ಸಂಧಿಗಳಲ್ಲಿ ಈ ಪ್ರಕಾರ ಹೇಳಲ್ಪಟ್ಟಿದೆ.

" ಸಂಗಮನಾಥನು ನಮ್ಮ ಬಸವನ ಶಿವಶರಣಯೋಗಕ್ಕೆ ಕಲ್ಪಾಂತ ನಿಧಿಯನ್ನು ಕೊಡೆಂದು ಒಂದು ಲಿಪಿಯನ್ನು ಕಳ್ಳಿಸಿ ಒಬ್ಬಾನೊಬ್ಬ ಯಕ್ಷ ಸಾಕಲ್ಯನನ್ನು ಕರೆದು ನೀನು ಈ ಲಿಪಿಯನ್ನು ತೆಗೆದುಕೊಂಡುಹೋಗಿ ಕಲ್ಯಾಣಪುರದಲ್ಲಿ ಶೋಭಿಸುವ ಬಿಜ್ಜಳಮಹೀಪಾಲನ ಸಭೆಯಲ್ಲಿ ಹಾಕೆಂದ್ಯ ಆಜ್ಞಾಪಿಸಲು ಆ ಯಕ್ಷನು ಆ ಲಿಪಿಯನ್ನು ತೆಗೆದುಕೊಂಡುಬಂದು ಬಿಜ್ಜ ಳೇಂದ್ರನ ಸಭೆಯಲ್ಲಿ ಹಾಕಿದನು. .... .... ....

" ಆ ಲಿಪಿಯನ್ನು ಯಾರೂ ಓದಲು ಸಮರ್ಥರಾಗದಿರಲು ಕರಣ ಶಾಲೆಯಲ್ಲಿ ಬರೆಯುತ್ತಿದ್ದ ಬಸವನ ಭಾವದಲ್ಲಿ ಅಶರೀರವಾಕ್ಯ ಶರಣಾ ಕಾರದಿಂದ ಬಂದು ಎಲೈ ಬಸವನೇ? ಇದು, ಲಿಂಗಜಂಗಮದ ಇರವನ್ನ ರಿದು ಮಾಡತಕ್ಕ ದಾಸೋಹಕ್ಕೆ ಯೋಗ್ಯವಾದ ಅಧಿಕ ಪದವಿಯನ್ನು ಕೊಡಬೇಕೆಂದು ಸಂಗಮೇಶನು ಲೀಲೆಯಿಂದ ಕಳುಹಿಸಿದ ಲಿಖಿತವು ಇದು ನಿನಗೆ ಸಾಧ್ಯವು. ನೀನು ಇದನ್ನು ಓದೆನಲು, .... ....

" ಬಸವನು ಕರಣಿಕರ ಸಭೆಯಿಂದ ಬಿಜ್ಜಳಮಹೀಪಾಲನ ಮುಂಭಾ ಗದಲ್ಲಿ ಬಂದು ನಿಂತನು. ಹಣೆಯಲ್ಲಿ ಭಸ್ಮವನ್ನೂ, ಕಂಠದಲ್ಲಿ ಲಿಂಗ ರುದ್ರಾಕ್ಷಿಗಳನ್ನೂ, ಶರೀರದಲ್ಲಿ ಶುಭ್ರವಾದ ಬಟ್ಟೆಯನ್ನೂ ಧರಿಸಿ ಕೇವಲ ಬಡವನಂತೆ ಕಾಣುತ್ತಿದ್ದ ಆ ಬಸವನನ್ನು ರಾಜಸಭೆಯವ

ರೆಲ್ಲರೂ ನೋಡಿ ಇವನಲ್ಲಿ ಏನೂ ಹುರುಳಿಲ್ಲ; ಸರಿಯಾದ ಪ್ರಾಯವೂ ಇಲ್ಲ. ಓದುತ್ತೇನೆಂದು ಬಂದಿರುವನಲ್ಲಾ! ಎಂದು ಆಶ್ಚರ್ಯಪಟ್ಟರು ....

" ಅನಂತರ ಬಸವನು ಆ ಓಲೆಯನ್ನು ನೋಡುತ್ತಾ ಎಲೈ ಮಹೀ ಪಾಲನೇ? ಈ ಲಿಪಿಯು- ಸ್ವಸ್ತಿಶ್ರೀಮನ್ಮಹಾದೇವಾದಿದೇವ ಸಂಸ್ತುತ್ಯ ಸಂಗಮನಾಥನ ಆಜ್ಞಾನುಸಾರವಾಗಿ ಬಂದಿರುವುದು. ಮಿಕ್ಕಿನ ದೇಶಸ್ಥಿತಿ ಯಲ್ಲ. ಗಾಥೆಯಲ್ಲ. ಅನ್ಯವಾದುದಲ್ಲ. ಸಿದ್ಧಾಂತವಲ್ಲ. ಬದ್ಧಾಂತ ವಲ್ಲ. ಈ ಲಿಪಿಯು ನಿನ್ನ ಭಾಗ್ಯದ ಸಮಸ್ತ ಸಾರೋದ್ಧಾರವು. ಮತ್ತು ಅರವತ್ತಾರುಕೋಟಿ ವಸ್ತುವನ್ನು ತೋರಿಸುವ ಅಂಜನವು. .... ....

" ಈ ಪ್ರಕಾರ ಓದಲು ಬಿಜ್ಜಳಭೂಪಾಲನು ಆ ದ್ರವ್ಯವೆಲ್ಲಿದೆ ತೋರಿ ಸೆಂದು ಬಸವನನ್ನು ಕೇಳಿಕೊಳ್ಳಲು ಅದು ಚಾಲುಕ್ಯಚಕ್ರೇಶ್ವರನ ಕಾಲದಿಂ ದಲೂ ಇಲ್ಲಿಯೇ ಇದೆಯೆಂದು ಮುಂಚೆಯೇ ಒಂದುವೇಳೆ ಆ ದ್ರವ್ಯವನ್ನು ತೆಗೆದುಕೊಂಡು ಉಪಯೋಗಿಸಿರುವನೋ ಏನೋ ಎಂಬಂತೆ ಆ ನಿಕ್ಷೇಪ ವಿದ್ದಲ್ಲಿ ಹೋಗಿ ತೋರಿಸಿ ಅಗೆಯಿಸಲಾಗಿ ಆ ನಿಧಿನಿಧಾನವು ನಿಜರೂಪ ವನ್ನು ತೋರಿಸಿತು. .... .... .... ....

" ಅನಂತರ ಬಿಜ್ಜಳಭೂಪಾಲನು ಅತ್ಯಾನಂದದಿಂದ ಬಸವನಿಗೆ ಬಹು ಸಂಭ್ರಮದಿಂದ ಪ್ರಧಾನಪಟ್ಟವನ್ನು ಕಟ್ಟಿ ಮುಖ್ಯದಂಡಾಧೀಶನನ್ನಾಗಿ ಮಾಡಿದನು "

ಈ ಸಂಗತಿಯಮೇಲಿಂದ ಬಿಜ್ಜಳರಾಜನಿಗೆ ಬಸವದೇವನ ಮೂಲಕ ಜಾತವೇದಿಮುನಿಗಳು ಹಿಂದಕ್ಕೆ ಚಾಲುಕ್ಯರು ಹೂಳಿಟ್ಟಿದ್ದ ದ್ರವ್ಯವನ್ನು ತೋರಿಸಿಕೊಟ್ಟರೆಂತಲೂ ಅದರಿಂದ ರಾಜನು ಸಂತೋಷಿಸಿ ಬಸವದೇವ ನನ್ನು ತನ್ನ ಮುಖ್ಯಮಂತ್ರಿಯನ್ನಾಗಿ ಮಾಡಿಕೊಂಡನೆಂತಲೂ ತಿಳಿಯಲು ಅಭ್ಯಂತರವಿಲ್ಲ. ಬಸವದೇವನ ಶ್ರೇಯಸ್ಸೇ ತಮ್ಮ ಇಷ್ಟಾರ್ಥವೆಂದು ಭಾವಿಸಿದ್ದ ಆತನ ಪರಮಗುರುಗಳಾದ ಜಾತವೇದಿಮುನಿಗಳು ನಾನಾಶಾಸ್ತ್ರ ಗಳಲ್ಲಿ ಮಹಾಜ್ಞಾನಿಗಳಾಗಿದ್ದರಷ್ಟೆ. ಅಂಥವರಿಗೆ ಆ ನಿಕ್ಷೇಪಶೋಧನೆ

ಯೇನೂ ಅಸಾಧ್ಯವಾದುದಾಗಿದ್ದಿತೆಂದು ಹೇಳಲಿಕ್ಕಾಗುವುದಿಲ್ಲ. ಮತ್ತು ತನಗೆ ಇಂಥ ಮಹತ್ವದ ಸಹಾಯವನ್ನು ಮಾಡಿದ ಈ ಮಹಾಪುರುಷನಿಗೆ ಬಿಜ್ಜಳರಾಜನು ಆಗ ಮುಖ್ಯ ಮಂತ್ರಿಪದವಿಯನ್ನು ಕೊಟ್ಟುದರಲ್ಲಿ ಆಶ್ಚರ್ಯವೂ ಇಲ್ಲ. ಅಂತು ಜಾತವೇದಿಮುನಿಗಳ ಕೃಪೆಯಿಂದಲೂ, ತನ್ನ ಬುದ್ಧಿ ಶಕ್ತಿಯಿಂದಲೂ, ಸೊಡ್ಡಳ ಬಾಚರಸರೇ ಮೊದಲಾದ ಕ್ಷೇಮ ಚಿಂತಕರ ಸಹಾಯದಿಂದಲೂ ಬಸವದೇವನು ತನ್ನ ೨೬ ನೆಯ ವರ್ಷ ದಲ್ಲಿ ಬಿಜ್ಜಳರಾಜನ ಮುಖ್ಯಮಂತ್ರಿಯಾದನೆಂದು ಹೇಳುವುದು ಯುಕ್ತವಾಗಿದೆಯೇ ವಿನಾ ಬಸವನ ತಂಗಿ ಪದ್ಮಿನಿ ಎಂಬವಳನ್ನು ಬಿಜ್ಜಳನು ಮದುವೆಯಾದುದರಿಂದ ಬಸವನಿಗೆ ಮುಖ್ಯ ಸೇನಾಪತಿತ್ವವು ದೊರೆಯಿತೆಂದು ಧರಣಿಪಂಡಿತನು ಹೇಳುವುದನ್ನು ಮತ್ತು ಇದನ್ನೇ ಮುಖ್ಯಾಧಾರವಾಗಿಟ್ಟುಕೊಂಡು ಡಾಕ್ಟರ್ ಭಾಂಡಾರಕರ್, ಶ್ರೀಯುತ ದೇಶಪಾಂಡೆ ಮೊದಲಾದವರು ಮಾಡಿರುವ ಊಹೆಗಳನ್ನು ನಂಬಲಿಕ್ಕಾಗುವುದಿಲ್ಲ.

ಬಸವದೇವನ ವಿಷಯದಲ್ಲಿ ಅನುಚಿತವಾದ ಮತ್ತು ಅಸತ್ಯವಾದ ನಾನಾಸಂಗತಿಗಳನ್ನು ಈ ಗ್ರಂಥಕಾರರೆಲ್ಲಾ ಯಾವಗ್ರಂಥದ ಆಧಾರದಿಂದ ಬರೆದಿದ್ದಾರೆಯೋ ಆ ಬಿಜ್ಜಳಚರಿತೆ ಯ ವಿಷಯವಾಗಿಯೂ ಅದನ್ನು ಬರೆದ ಧರಣಿಪಂಡಿತ ನ ವಿಷಯವಾಗಿಯೂ ಸ್ವಲ್ಪ ಯೋಚಿಸೋಣ. ಈ ವಿಷಯವಾಗಿ ಶ್ರೀಯುತ ಆರ್. ನರಸಿಂಹಾಚಾರ್ಯರವರು ತಮ್ಮ ಕವಿಚರಿತೆಯ ೨ ನೆಯ ಭಾಗದ ೪೧೮ ನೆಯ ಪುಟದಲ್ಲಿ ಬರೆದಿರುವುದೇನೆಂದರೆ:—

ಈ ಧರಣಿಪಂಡಿತನು ಜೈನಕವಿಯು. ಈತನು ಸುಮಾರು ೧೬೫೦ ರಲ್ಲಿ ಇದ್ದನೆಂದು ಊಹಿಸುತ್ತೇವೆ. ಈತನು ಬಿಜ್ಜಳರಾಯಚರಿತೆಯನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ. "ಹಿಂದೆ ವಿಜಯಮ್ಮ ತನ್ನ ತಾಯಿಗೆ ಹೇಳಿದ ಈ ಕಥೆಯನ್ನು ಕವಿ ವಿಸ್ತರಿಸಿ ಬರೆದಂತೆ ಹೇಳುತ್ತಾನೆ."

ಶ್ರೀ ಬಸವಣ್ಣನವರ ನಂತರ ಐನೂರುವರ್ಷಗಳಮೇಲೆ ವೀರಶೈವ ಮತದ್ವೇಷಿಯಾದ ಒಬ್ಬ ಜೈನಕವಿಯು ತನ್ನ ತಾಯಿಗೆ ಒಬ್ಬ ಅಜ್ಜಿಯು

ಹೇಳಿದ ಕಥೆಯನ್ನೇ ಆಧಾರವಾಗಿಟ್ಟುಕೊಂಡು ಅದನ್ನು ವಿಸ್ತರಿಸಿ ಬರೆದು ದರಲ್ಲಿ ನಿಜಾಂಶಗಳೆಷ್ಟಿರಬಹುದೆಂಬುದನ್ನು ವಾಚಕರೇ ಯೋಚಿಸಲಿ ! ಸೋಮನಾರಾಧ್ಯರು (ಕ್ರಿ. ಶ. ೧೧೯೫) ಬರೆದ ಬಸವಪುರಾಣವನ್ನು ಭೀಮಕವಿಯು (ಕ್ರಿ. ಶ. ೧೩೬೯) ಕನ್ನಡದಲ್ಲಿ ಬರೆಯಲು ಬಿಜ್ಜಳರಾಯನ ವಿಷಯವಾಗಿಯೂ ಜೈನಮತದ ವಿಷಯವಾಗಿಯೂ ಅದರಲ್ಲಿ ಅಲ್ಲಗಳೆಯಲ್ಪಟ್ಟದ್ದನ್ನು ನೋಡಿ ಧರಣಿಪಂಡಿತನು ಸೈರಿಸಲಾರದೆ ಮುನ್ನೂರು ವರ್ಷಗಳ ಮೇಲೆ ಅದಕ್ಕೆ ಪ್ರತಿಯಾಗಿ ಕೇವಲ ತನ್ನ ಕಲ್ಪನೆಯಿಂದಲೇ ಈ ಬಿಜ್ಜಳಚರಿತೆಯನ್ನು ಬರೆದನೆಂದು ಸ್ಪಷ್ಟವಾಗಿ ತೋರುತ್ತದೆ. ಏಕೆಂದರೆ ಅದರಲ್ಲಿ ಬಿಜ್ಜಳರಾಜನ ಸ್ತುತಿ, ಬಸವ ಮತ್ತು ವೀರಶೈವ ಮತಗಳ ನಿಂದೆಗಳೇ ತುಂಬಿ ತುಳುಕುತ್ತಲಿವೆ. ಐತಿಹಾಸಿಕ ದೃಷ್ಟಿಯಿಂದ ಬರೆದ ಡಾಕ್ಟರ್ ಭಂಡಾರಕರ್‌ರವರೇ ಮೊದಲಾದ ಗ್ರಂಥಕಾರರೆಲ್ಲಾ ಧರಣಿಪಂಡಿತನ ಇಂತಹ ಪುಸ್ತಕವನ್ನು ಆಧಾರವಾಗಿಟ್ಟುಕೊಂಡುದು ಆಶ್ಚರ್ಯವಲ್ಲವೇ ?

ಬಿಜ್ಜಳನ ತಂಗಿಯನ್ನು ಬಸವನು ಲಗ್ನವಾದನೆಂದು ಬಸವಪುರಾಣದಲ್ಲಿ ಬರೆದಿರುವುದರ ಮೇಲಿಂದಲೇ ಬಸವನ ತಂಗಿಯನ್ನು ಬಿಜ್ಜಳನು ಲಗ್ನವಾಗಿದ್ದನೆಂಬುದು ಸಿದ್ಧವಾಗುತ್ತದೆಂದು ಡಾಕ್ಟರ್ ಭಂಡಾರ್‌ಕರರು ತರ್ಕಿಸಿದ್ದಾರೆ. ಬಸವಪುರಾಣಕ್ಕಿಂತಲೂ ಬಿಜ್ಜಳ ಚರಿತೆಯು ಮುಂಚೆಯೇ ಬರೆಯಲ್ಪಟ್ಟಿದ್ದರೆ ಈ ಪ್ರಕಾರ ಊಹಿಸಬಹುದಾಗಿತ್ತು. ಆದರೆ ಬಿಜ್ಜಳ ಚರಿತೆಯೇ ಬಸವ ಪುರಾಣವು ಬರೆಯಲ್ಪಟ್ಟ ಐನೂರು ವರ್ಷಗಳಮೇಲೆ ರಚಿಸಲ್ಪಟ್ಟಿದೆಯಷ್ಟೆ. ಇದರ ಮೇಲಿಂದ ಡಾಕ್ಟರ್ ಸಾಹೇಬರ ತರ್ಕದ ಪ್ರಕಾರ ಬಿಜ್ಜಳರಾಯನ ಘನತೆಯನ್ನು ಉಳಿಸುವುದಕ್ಕಾಗಿಯೇ ಬಸವನ ತಂಗಿಯನ್ನು ಬಿಜ್ಜಳರಾಯನು ಲಗ್ನವಾಗಿದ್ದನೆಂದು ಧರಣಿಪಂಡಿತನು ಬರೆದನೆಂಬುದು ಸಿದ್ಧವಾಗುವುದಿಲ್ಲವೇ ? ಈ ಉಭಯ ಗ್ರಂಥಗಳ

ಕಾಲಮನವು ಡಾಕ್ಟರ್ ಸಾಹೇಬರಿಗೆ ಗೊತ್ತಿದ್ದಿದ್ದರೆ ಈ ಪ್ರಕಾರ ಬಸವಣ್ಣನವರ ಮೇಲೆ ದೋಷಾರೋಪಣೆಯನ್ನು ಮಾಡುತ್ತಿರಲಿಲ್ಲ.

ಶ್ರೀಯುತ ದೇಶಪಾಂಡೆಯವರು ಬಿಜ್ಜಳನು ಶಿವಾಜಿಯ ಮೊಮ್ಮಗನಾದ ಶಾಹುರಾಜನಂತಿದ್ದನೆಂದು ಊಹಿಸಿ ಆತನ ವಿಷಯದಲ್ಲಿ ಅಷ್ಟು ಹೀನವಾಗಿ ಬರೆದುದು ವಿಹಿತವಾದುದಲ್ಲ. ಬಿಜ್ಜಳರಾಜನು ಹಾಗೆ ಕೀಳಾಗಿದ್ದನೆಂದು ಹೇಳಲಿಕ್ಕಾಗುವುದಿಲ್ಲ. ಆತನೇನೋ ಶಾಹುರಾಜನಂತೆ ತಾತನಿಂದ ಸಂಪಾದಿಸಲ್ಪಟ್ಟಿದ್ದ ರಾಜ್ಯವನ್ನಾಳಿದವನಲ್ಲ. ಆತನ ತಂದೆಯಾದ ಪೇರಮಡಿ ಎಂಬಾತನು ಮೂರನೆಯ ಸೋಮೇಶ್ವರನ ಕಾಲದಲ್ಲಿ (ಕ್ರಿ. ಶ. ೧೧೨೮) ವಿಜಾಪುರದ ಹತ್ತಿರಿದ್ದ ತಾರದವಾಡಿ ಎಂಬ ಜಿಲ್ಲೆಗೆ ಮುಖ್ಯಾಧಿಕಾರಿಯಾಗಿದ್ದನು. ಇಂತಹ ಒಂದು ಜಿಲ್ಲಾಧಿಕಾರಿಯ ಮಗನು ತನ್ನ ರಾಜನು ನಿರ್ಬಲನಾದುದನ್ನೇ ಸಾಧಿಸಿ ಕೊಲ್ಲಾಪುರ, ಕಾಳತೇಯ ಮೊದಲಾದ ರಾಜರ ಸಹಾಯವನ್ನು ಹೊಂದಿ ತನ್ನ ರಾಜನನ್ನು ಬನವಾಸಿಯವರೆಗೆ ಓಡಿಸಿ ತಾನೇ ಸಾರ್ವಭೌಮನಾಗಬೇಕಾದರೆ ಆತನಲ್ಲಿ ಮುಂದಾಲೋಚನೆ, ಸಾಹಸ, ಶೌರ್ಯಾದಿ ಗುಣಗಳಿರಲಿಲ್ಲವೆಂದು ಹೇಳಬಹುದೇ ? ಇಂಥ ಸಮರ್ಥನಾದ ರಾಜನು ಬಸವದೇವನನ್ನು ತನ್ನ ಮಂತ್ರಿಯನ್ನಾಗಿ ಮಾಡಿಕೊಳ್ಳಬೇಕಾದರೆ ಬಸವದೇವನಲ್ಲಿಯೂ ಅಂತಹ ಯೋಗ್ಯತೆಯಿದ್ದಿತೆಂದು ತಿಳಿಯುವುದೇ ವಿಹಿತವಲ್ಲವೇ ?

ಶ್ರೀ ಬಸವದೇವನು ಪ್ರಧಾನಪಟ್ಟವನ್ನು ವಹಿಸಿದನಂತರ ತನ್ನ ಮುಂದಣ ಕಾರ್ಯಗಳನ್ನು ಕುರಿತು ಪ್ರತಿಜ್ಞೆಗಳನ್ನು ಮಾಡಿದನೆಂದು ಸಿಂಗಿರಾಜ ಪುರಾಣದ ಎಂಟನೆಯ ಸಂಧಿಯಿಂದ ಗೊತ್ತಾಗುತ್ತದೆ. ಅವುಗಳಲ್ಲಿ ಕೆಲವುಗಳನ್ನು ಇಲ್ಲಿ ಉದಾಹರಿಸಿದೆ.

“ ಗುರುಲಿಂಗಜಂಗಮ ಸೇವೆಗಾಗಿಯೇ ನನ್ನ ಆಯುಷ್ಯವನ್ನೂ, ನನ್ನ ದೇಹವನ್ನೂ, ನನ್ನ ಜೀವವನ್ನೂ ವಂಚನೆಯಿಲ್ಲದೆ ಒಪ್ಪಿಸುತ್ತೇನೆಂಬ ಭಾಷೆ.

ಮಾಯೆಯನ್ನೂ, ಮನ್ಮಥನನ್ನೂ, ಕಾಲನನ್ನೂ, ಕರ್ಮವನ್ನೂ, ಭಯವನ್ನೂ, ಭಂಗವನ್ನೂ, ಖಂಡಿತವಾಗಿಯೂ ಜಯಿಸುತ್ತೇನೆಂಬ ಭಾಷೆ.

ಹೊತ್ತಾರೆಯಲ್ಲಿದ್ದು ಕಣ್ಣನ್ನು ಮುಸೆವುತ್ತಾ ಕುದಿ ಕುದಿದು ಇದು ನನ್ನ ಮಡದಿಗೆ ಇದು ನನ್ನ ಮಕ್ಕಳಿಗೆ ಎಂದು ಬಯಸಿದೊಡೆ ಎನ್ನಮನಕ್ಕೆ ಮನವೇ ಸಾಕ್ಷಿ. ಖಂಡಿತವಾಗಿಯೂ ಬಯಸುವುದಿಲ್ಲ.

ಭವಿಯಾದ ಬಿಜ್ಜಳನ ಸಿಹ್ಮಾಸನದ ಕೆಳಗೆ ಕುಳಿತು ಓಲೈಸಬಹುದೇ ಎಂದೊಡೆ ಹೊಲೆ ಹೊಲೆಯರ ಮನೆಯಲಿ ಹೊಕ್ಕು ಚೆನ್ನಾಗಿ ಕೈ ಕೂಲಿಯನ್ನು ಮಾಡಿಯಾದರೂ ನಿಮ್ಮ ನಿಲುವಿಂಗೆ ನಿಲ್ಲುವೆನಲ್ಲದೆ ಎನ್ನಯ ಹೊಟ್ಟೆಯ ರಕ್ಷಣಕ್ಕಾಗಿ ಸೇವಿಸಿದೊಡೆ ತಲೆದಂಡವಯ್ಯಾ ಕೂಡಲಸಂಗಮದೇವಾ.

ನಾನು ಗುರುಪೂಜೆಗೆಂದು ಆರಂಭಮಾಡುವೆನು, ನಾನು ಲಿಂಗಾರ್ಚನೆಗೆಂದು ಆರಂಭಮಾಡುವೆನು, ನಾನು ಜಂಗಮದಾಸೋಹಕ್ಕೆಂದು ಸೇವೆಮಾಡುವೆನು, ನಾನು ಅವಕರ್ಮವನ್ನು ಮಾಡಿದೊಡೆಯು ಕರ್ಮಫಲಭೋಗವನ್ನು ನೀನೇ ಕೊಡುವಾತನೆಂಬುದನ್ನು ನಾನೇ ಬಲ್ಲೆನಯ್ಯಾ, ನೀನು ಕೊಟ್ಟ ದ್ರವ್ಯವನ್ನು ನಿಮಗೂ ನಿಮ್ಮ ಶರಣರಿಗೂ ಅಲ್ಲದೆ ಮತ್ತೊಂದು ಕಾರ್ಯಕ್ಕೆ ಉಪಯೋಗಿಸೆನಯ್ಯಾ, ನಿಮ್ಮ ಸೊಮ್ಮನ್ನು ನಿಮಗೆ ಸಲಿಸುವೆನು. ನಿಮ್ಮಾಣೆ. ನಿಮ್ಮಾಣೆ. ಕೂಡಲ ಸಂಗಮದೇವಾ.

ಭವಿಯ ಸಂಗವನ್ನು ಬಿಡುವ ಪರಿಯಂತರ ಭಕ್ತನು ಎನ್ನುವುದಿಲ್ಲವಯ್ಯಾ, ಪರಸ್ತ್ರೀಯನ್ನು ಪರರಸ್ವತ್ತನ್ನು ಬಿಡುವ ಪರಿಯಂತರ ಮಹೇಶ್ವರನು ಎನ್ನುವುದಿಲ್ಲವಯ್ಯಾ. ಆಧಿವ್ಯಾಧಿಗಳನ್ನು ನಷ್ಟಮಾಡಿಕೊಳ್ಳುವಪರಿಯಂತರ ಪ್ರಸಾದಿಯು ಎನ್ನುವುದಿಲ್ಲವಯ್ಯಾ. ಇವೆಲ್ಲವೂ ಒಂದೊಂದು ಭಾಷೆಯು.

ಮೋಸವ್ರತಂಗಳನ್ನು ನಾನರಿಯೆನು. ಅಘಟಿತಾಘಟಿತ ವರ್ತಮಾನವನ್ನು ನಾನರಿಯೆನು. ನಿಮ್ಮ ಶರಣರ ತೊತ್ತು ಭೃತ್ಯನಾಗಿರುವೆನಯ್ಯಾ ಕೂಡಲ ಸಂಗಮದೇವಾ.

ನಾನು ನೋಡುವವರಿಲ್ಲದೆ ಕಂದಿದೆನಯ್ಯಾ. ನಾನು ನುಡಿಸುವವರಿಲ್ಲದೆ ಕುಂದಿದೆನಯ್ಯಾ. ನಾನು ತನುಮನೋಧನವ ಬೇಡುವವರಿಲ್ಲದೆ ಬಡವನಾದೆನಯ್ಯಾ. ಕಾಡುವ ಬೇಡುವ ಶರಣರ ತಂದು ಕಾಡಿಸು ಬೇಡಿಸು ಕೂಡಲ ಸಂಗಮ ದೇವಾ.

ನಿನ್ನ ಸೇವಾವೃತ್ತಿಯಲ್ಲಿಯೂ, ನಿನ್ನ ಶರಣರ ಸೇವಾವೃತ್ತಿಯಲ್ಲಿಯೂ ತಿರಸ್ಕಾರವನ್ನು ಮಾಡಿದೊಡೆ, ಅಳಲಿಸುತ ಬಳಲಿಸಿದೊಡೆ, ಚಚ್ಚಿಸಿ ಮೇಳವಾಡಿದೊಡೆ,

ಬೆದರು ದೋರಿದೊಡೆ, ಬೋಳೈಸುತ್ತಾ ಒಳಹೊಗರನೊತ್ತಿ ನೋಡಿದೊಡೆ, ಮಯ್ಯಾ ನುತ್ತಾ ಹೊಳೆದು ಹೋದೊಡೆ, ಎನ್ನ ಬೇಳು ಮಾಡಿದೊಡೆ, ಬೆಂಬತ್ತಿದೊಡೆ ಎಲೈ ಶಿವನೇ ! ನಿಮ್ಮ ಆಳಾದ ನನ್ನ ಮನವು ನಾಣ್ಚಿದೊಡೆ, ಚಿತ್ತದಲ್ಲಿ ಭೀತಿಹೊಂದಿದೊಡೆ, ಭಾವವು ಭ್ರಮಿಸಿದೊಡೆ, ನಿಮ್ಮಾಣೆಯಾಗಿಯೂ ನಿಮ್ಮ ಊಳಿಗದವನಲ್ಲವಯ್ಯಾ ಕೂಡಲ ಸಂಗಮ ದೇವಾ.

ಅರ್ಥವನ್ನು ಅನರ್ಥಮಾಡಿ ಕಳುಹು ಮಾಡುತ್ತಿರಲು, ಹುಟ್ಟಿದಮಕ್ಕಳನ್ನು ಕಡಿದು ತುಂಡನ್ನೇ ಮಾಡುತ್ತಿರಲು, ನನ್ನ ಸ್ತ್ರೀಯಳನ್ನೂ ನನ್ನ ಮುಂದೆ ಅಭಿಮಾನ ವನ್ನು ಕಳೆಯುತ್ತಿರಲು, ಇಂತೀ ಮೂರು ಹೊರಗಣವು. ಮತ್ತೆ ಎನ್ನ ಅಂಗದ ಮೇಲೆ ಬರಲು ಹಿಡಿದು ಖಂಡವ ಕೊಯ್ಯುತ್ತಿರಲು, ಇಕ್ಕುವ ಶೂಲವು ಪ್ರಾಪ್ತಿಸಲಿ, ಇತ್ತೊಂದೆಸೆ ಯತ್ತೊಂದೆಸೆಯಾಗುತ್ತಿರಲಿ. ಮತ್ತೆ ಮತ್ತೆ ಲಿಂಗಜಂಗಮದ ಆರಾಧ ನೆಯ ಮಾಡುವೆನು. ಪ್ರಸಾದಕ್ಕೆ ತಪ್ಪುವುದಿಲ್ಲ. ಇಂತಪ್ಪ ಭಾಷೆಯು ಕಿಂಚಿತ್ತು ಹುಸಿಯಾದೊಡೆ ನೀನು ಆ ದಿನವೇ ನನ್ನ ಮೂಗನ್ನು ಕೊಯ್ಯುವವನಾಗು ಕೂಡಲ ಸಂಗಮ ದೇವಾ. "

ಪ್ರಧಾನ ಪಟ್ಟವನ್ನು ವಹಿಸಿದನಂತರ ಬಸವಸಚಿವನು ಮಾಡಿದ ಈ ಭಾಷೆಗಳಮೇಲಿಂದ ವೀರಶೈವ ಮತೋದ್ಧಾರವೇ ತನ್ನ ಮುಖ್ಯಧ್ಯೇಯ ವೆಂತಲೂ ಅದಕ್ಕೋಸ್ಕರವಾಗಿಯೇ ತನ್ನ ತನುಮನಾದಿ ಸರ್ವಸ್ವವನ್ನೂ ನಿರ್ವಂಚನೆಯಿಂದಲೂ ನಿರ್ಭಯದಿಂದಲೂ ಸಮರ್ಪಿಸುವೆನೆಂತಲೂ ಮತ್ತು ಈ ಕಾರ್ಯಗಳನ್ನು-ಅಧಿಕಾರ ಅಥವಾ ಶಸ್ತ್ರಬಲಗಳಿಂದ ಮಾಡದೆ— ಕೇವಲ ಸೇವಾಭಕ್ತಿಗಳಿಂದಲೇ ನಡೆಸುವೆನೆಂತಲೂ ಜನಗಳಿಗೆ ತಿಳಿಪಡಿಸಿದ ನೆಂದು ಹೇಳಬಹುದು. ಬಸವ ದಂಡಾಧೀಶನು ಮುಖ್ಯ ಮಂತ್ರಿ ಯಾದ ಸ್ವಲ್ಪದಿವಸಗಳಲ್ಲಿಯೇ ನೀಲಮ್ಮ ಅಥವಾ ನೀಲಲೋಚನೆ ಎಂಬ ಸಾಧ್ವೀ ಸ್ತ್ರೀಯಳನ್ನು ವಿವಾಹ ವಾದನು. ನೀಲಮ್ಮನು ಬಲದೇವ ಮಂತ್ರಿಯ ತಮ್ಮನಾದ ಸಿದ್ಧಣ್ಣಮಂತ್ರಿಯ ಮಗಳೆಂದು ಷಡು ಷಷ್ಟಿ ಪುರಾತನರ ಪುರಾಣ ಮೊದಲಾದ ಗ್ರಂಥಗಳಲ್ಲಿ ಹೇಳಿದೆ. ಇದು ನಿಜವೆಂದು ತೋರುವುದಿಲ್ಲ. ಏಕೆಂದರೆ ಮಾದಲಾಂಬಿಕೆಗೆ ಬಲದೇವನ ಲ್ಲದೆ ಸಿದ್ಧಣ್ಣನೆಂಬ ಮತ್ತೊಬ್ಬ ಸಹೋದರ ನಿದ್ದಂತೆ ಬೇರೆ ಗ್ರಂಥಗಳಲ್ಲಿ

ಬರೆಯಲ್ಪಟ್ಟಿಲ್ಲ. ನೀಲಲೋಚನೆಯು ಬಿಜ್ಜಳರಾಜನ ನಿಜಸಹೋದರಿಯಾಗಿದ್ದಳೆಂಬಂಶವೂ ಸಮಂಜಸವಾಗಿ ಕಾಣುವುದಿಲ್ಲ. ಆದಕಾರಣ ಈ ವಿಷಯವಾಗಿ ಸಿಂಗಿರಾಜ ಪುರಾಣದ ಎಳನೆಯ ಸಂಧಿಯಲ್ಲಿ ಉಕ್ತವಾಗಿರುವ ಈ ಕೆಳಗಿನ ಸಂಗತಿಯೇ ಸಮಂಜಸವಾಗಿ ತೋರುತ್ತದೆ.

"ನಮ್ಮ (ಬಿಜ್ಜಳರಾಜನ) ತಾಯಿಯು ನಮ್ಮ ತಂದೆಯಸಂಗಡ ಸಹಗಮನವಾದ ಕಾಲದಲ್ಲಿ ನಮ್ಮ ತಮ್ಮ ಕರ್ಣದೇವನು ಶಿಶುವಾಗಿದ್ದನು. ಆತನನ್ನು ಮಂತ್ರಿಕುಲಪಾಲ ಸಿದ್ಧರಡಣ್ಣಾಯನ ಅರಸಿಯಾದ ಪದ್ಮಗಂಧಿಯು ಹಾಲನ್ನು ಕೊಟ್ಟು ಸಲಹಿದಳು. ಅವಳಿಗೆ ನೀಲಲೋಚನೆಯೆಂಬೊಬ್ಬ ಮಗಳಿದ್ದಾಳೆ. ಆಕೆಯು ನನಗೆ (ಬಿಜ್ಜಳರಾಜನಿಗೆ) ತಂಗಿಯಾಗಬೇಕು." ಆದುದರಿಂದಲೇ ನೀಲಮ್ಮನಿಗೆ ಕೆಲವರು ಸಿದ್ಧಣ್ಣಮಂತ್ರಿಯ ಮಗಳೆಂಬುದಾಗಿಯೂ, ಕೆಲವರು ಬಿಜ್ಜಳರಾಯನ ಸಹೋದರಿಯೆಂಬುದಾಗಿಯು ಹೇಳಿರುವಂತೆ ತೋರುತ್ತದೆ. ಅಂತು ನೀಲಲೋಚನೆಯು ಜೈನಮತದ ಒಂದು ಪ್ರಸಿದ್ಧಮನೆತನಕ್ಕೆ ಸೇರಿದವಳೆಂಬ ವಿಷಯದಲ್ಲಿ ಮಾತ್ರ ಸಂದೇಹವಿಲ್ಲ. ಈ ನೀಲಮ್ಮನಿಗೆ ಆ ಪಂಚಗಣಾಧೀಶರಿಂದ ದೀಕ್ಷೆಯಾಯಿತೆಂದು ಸಿಂಗಿರಾಜಪುರಾಣದಲ್ಲಿ ಹೇಳಿದೆ. ಶ್ರೀ ಸಂಗಮನಾಥನಿಂದಲೇ ದೀಕ್ಷೆಯಾಯಿತೆಂದು ಬೇರೆ ಗ್ರಂಥಗಳಲ್ಲಿ ಉಕ್ತವಾಗಿದೆ. ಅಂತು ನೀಲಮ್ಮನಿಗೆ ವೀರಶೈವಮತ ದೀಕ್ಷೆಯನ್ನು ಮಾಡಿಸಿ ಬಸವದಂಡಾಧೀಶನು ವಿವಾಹವಾದನೆಂಬುದು ನಿರ್ವಿವಾದವಾದ ಸಂಗತಿಯಾಗಿದೆ. ಈಪ್ರಕಾರ ನಮ್ಮ ಚರಿತ್ರನಾಯಕನು ತನ್ನ ೨೧-೨೨ ನೆಯ ವರ್ಷದಲ್ಲಿ ಜಾತವೇದಿಮುನಿಗಳ ಕೃಪೆಯಿಂದ ಕರ್ನಾಟಕದ ಸಾರ್ವಭೌಮನಾದ ಆ ಬಿಜ್ಜಳರಾಜನ ಮುಖ್ಯ ಮಂತ್ರಿಯಾಗಿ ಗಂಗಾಂಬಿಕೆ ಮತ್ತು ನೀಲಲೋಚನೆ ಎಂಬುಭಯ ಪತ್ನಿಯರೊಡನೆ ಮತ್ತು ಶಿವಸ್ವಾಮಿ, ಅಕ್ಕನಾಗಮ್ಮ, ಚೆನ್ನಬಸವದೇವ ಇವರೊಂದಿಗೆ ಕಲ್ಯಾಣಪಟ್ಟಣದಲ್ಲಿ ಅತ್ಯಂತವೈಭವದಿಂದ ವಾಸವಾಗಿದ್ದನೆಂದು ಧಾರಾಳವಾಗಿ ಹೇಳಬಹುದು.

## ೪ನೆಯ ಪ್ರಕರಣ.

## ವೀರಶೈವಮತ.

ಶ್ರೀ. ಬಸವಣ್ಣನವರು ಬಿಜ್ಜಳರಾಜನ ಸಚಿವಶಿರೋಮಣಿಗಳಾದ ನಂತರ ಯಾವ ವೀರಶೈವ ಮತೋದ್ಧಾರಕ್ಕೋಸ್ಕರವಾಗಿಯೇ ತಮ್ಮ ಸರ್ವಸ್ವವನ್ನೂ ಸಮರ್ಪಿಸಿದರೋ ಆ ವೀರಶೈವಮತವು ವೇದಾಗಮೋಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟದಾಗಿಯೂ, ಶ್ರೀ ನೀಲಕಂಠ ಶಿವಾಚರ್ಯರ್, ಶ್ರೀ ರೇಣುಕಾಚಾರ್ಯರ್, ಮೊದಲಾದ ಮಹಾಮಹಾ ಜ್ಞಾನಿಗಳಿಂದ ಬೋಧಿಸಲ್ಪಟ್ಟದಾಗಿಯೂ, ಮಾಣಿಕ್ಯವಾಚಕರ್, ದೇವರದಾಸಿಮಯ್ಯ ಮೊದಲಾದ ಅಸಂಖ್ಯ ಮಹಿಮಾಶಾಲಿಗಳಿಂದ ಆಚರಿಸಲ್ಪಟ್ಟದಾಗಿಯೂ ಇಷ್ಟೇ ಅಲ್ಲ; ಭಾರತೀಯತತ್ವಜ್ಞಾನದಲ್ಲಿ ಒಂದು ವಿಶೇಷತರವಾದ ವೈಸಿಷ್ಟತೆಯನ್ನು ಹೊಂದಿರುವುದಾಗಿಯೂ ಇರುವುದರಿಂದಲೇ ಮಹಾನುಭಾವರಾದ ಬಸವಣ್ಣನವರು ಈ ಮತಸೇವೆಯೇ ತಮ್ಮ ಜೀವಿತವೆಂದು ಭಾವಿಸಿದರು. ಇಂತಹ ಪ್ರಸಿದ್ಧ ಮತದ ತತ್ವಗಳನ್ನು ಕನ್ನಡದೇಶದಲ್ಲಿರುವವರಿಗೆ ಕನ್ನಡಭಾಷೆಯಲ್ಲಿ ಈಗ ಹೊಸದಾಗಿ ಬರೆದು ತಿಳುಹಿಸಬೇಕಾದ ಆವಶ್ಯಕತೆಯು ತಿಲಾಂಶವಾದರೂ ಇದೆಯೆಂದು ತೋರುವುದಿಲ್ಲ. ಏಕೆಂದರೆ, ಈ ಮತದ ಅಸಂಖ್ಯಗ್ರಂಥಗಳು ಕನ್ನಡಭಾಷೆಯಲ್ಲಿ ಹೇರಳವಾಗಿವೆ. ಕನ್ನಡಭಾಷಾಮಾತೆಗೆ ವೀರಶೈವಮತ ಗ್ರಂಥಾವಳಿಯು ಘನತರವಾದ ಒಂದು ದಿವ್ಯಾಭರಣವಾಗಿಯೇ ಪರಿಣಮಿಸಿದೆ. ಹೀಗಿದ್ದರೂ ಈ ಚರಿತ್ರನಾಯಕರು ಯಾವ ಮತೋದ್ಧಾರದ ಕಾರ್ಯದಿಂದಲೇ ಇಷ್ಟು ಪೂಜ್ಯರಾಗಿರುವರೋ ಆ ವೀರಶೈವಮತದ ತತ್ವಗಳು ಬಹು ಸಂಕ್ಷಿಪ್ತವಾಗಿಯಾದರೂ ಈ ಪುಣ್ಯಪುರುಷರ

ಚರಿತ್ರೆಯಲ್ಲಿರಬೇಕಾದುದು ಆವಶ್ಯಕವಾಗಿರುವುದರಿಂದ ಕೆಲವು ಮುಖ್ಯಸಂಗತಿಗಳನ್ನು ಇಲ್ಲಿ ಅತಿ ಸಂಕ್ಷಿಪ್ತವಾಗಿ ವಿವರಿಸಿದೆ.

(೧) ನಾಮ.

ಈ ವೀರಶೈವ ಮತಸಿದ್ಧಾಂತಕ್ಕೆ ಶಕ್ತಿ ವಿಶಿಷ್ಟಾದ್ವೈತವೆಂತಲೂ, ಶಿವಾದ್ವೈತವೆಂತಲೂ, ವಿಶೇಷಾದ್ವೈತವೆಂತಲೂ, ಪರ್ಯಾಯನಾಮಗಳಿವೆ. ಈ ಸಿದ್ಧಾಂತಗಳಪ್ರಕಾರ ನಡೆಯುವವರಿಗೆ ವೀರಶೈವರು ಅಥವಾ ಲಿಂಗಾಯತರು ಇಲ್ಲವೆ ಅಪ್ರಾಕೃತರು ಎಂದು ಹೇಳುತ್ತಿದ್ದಾರೆ.

(೨) ಪರಮಾತ್ಮ.

ಸಚ್ಚಿದಾನಂದ ನಿತ್ಯನಿರಂಜನ ಶುದ್ಧನಿರ್ಮಲ ನಿರುಪದ್ರವಿ ನಿರ್ಗುಣ ಸದಾಪರಿಪೂರ್ಣ ಇತ್ಯಾದಿ ಲಕ್ಷಣಗಳುಳ್ಳ ಪರಮಾತ್ಮನೊಬ್ಬನೇ ಇದ್ದಾನೆ.

ಈತನು ಲೀಲೆಯಿಂದ ಯೋಗಿಜನಗಳ ಉಪಕಾರಾರ್ಥವಾಗಿ ಜಗತ್ತನ್ನುಂಟುಮಾಡಬೇಕೆಂದು ಯೋಚಿಸಲು ಈತನಲ್ಲಿ ಪರಾಶಕ್ತಿಯುಂಟಾಯಿತು. ಆ ಪರಾಶಕ್ತಿಯ ಅಂಶಭೇದದಿಂದ ಆದಿಶಕ್ತಿಯು ಅದರಿಂದ ಇಚ್ಛಾಶಕ್ತಿಯು ಅದರಿಂದ ಜ್ಞಾನಶಕ್ತಿಯು ಅದರಿಂದ ಕ್ರಿಯಾಶಕ್ತಿಯು ಈ ಪ್ರಕಾರ ಪಂಚಶಕ್ತಿಗಳುಂಟಾದವು.

ಅನಂತರ ಪೂಜ್ಯ ಪೂಜಕಭಾವದಿಂದ ನಿರ್ಗುಣ ಮತ್ತು ಸಗುಣಗಳೆಂಬೆರಡು ಭೇದಗಳಾದವು. ಇವುಗಳಿಂದ ಶಿವತತ್ವ, ಅಮೂರ್ತ, ಸಮೂರ್ತ, ಕರ್ತೃ, ಕರ್ಮಗಳೆಂಬ ಪಂಚಸಾದಾಖ್ಯಗಳುಂಟಾದವು. ಇವುಗಳಿಗೇನೇ ಸದಾಶಿವ, ಈಶ, ಬ್ರಹ್ಮೇಶ, ಈಶ್ವರ, ಈಶಾನ ಎಂದು ಹೇಳುತ್ತಿದ್ದಾರೆ.

ಲಿಂಗಮೂರ್ತ್ಯಾದಿ ಚರ್ಮಚಕ್ಷುಗಳಿಗೆ ತೋರುವ ಚಿಹ್ನೆಗಳು ಸ್ಥೂಲವೆಂತಲೂ, ಯೋಗಿಜನಗಳ ಜ್ಞಾನದೃಷ್ಟಿಗೆ ಧ್ಯೇಯವಾಗಿರುವುದು ಸೂಕ್ಷ್ಮವೆಂತಲೂ, ನಿತ್ಯ, ಸತ್ಯ, ಸದಾನಂದ, ಅವ್ಯಯ, ಮತ್ತು ಕೇವಲ ಸುಖಮಯವಾಗಿರತಕ್ಕದ್ದೇ ಪರ ವೆಂತಲೂ ಭಕ್ತನು ಭಾವಿಸಬೇಕು. ಈ ನಿರ್ಗುಣ

ಪರಮಾತ್ಮನಿಗೆ ಶಿವನೆಂದು, ಸಗುಣ ಪರಮಾತ್ಮನಿಗೆ ಸದಾಶಿವನೆಂದು ಹೇಳಲ್ಪಟ್ಟಿದೆ. (ಸೂಕ್ಷ್ಮಾಗಮ. ಪಟಲ. ೧. ೧೫-೩೨)

ನಾದರೂಪನಾದ ಶಿವನೇ ಲಿಂಗವು. ಲಿಂಗಪೀಠವೇ ಮಹಾಶಕ್ತಿ. ಆ ಮಹಾಶಕ್ತಿಯು ಬಿಂದುರೂಪಳು. ಈ ನಾದಬಿಂದುಗಳ (ಶಿವಶಕ್ತಿಯರ) ಸಂಯೋಗದಲ್ಲಿಯೇ ಕಲೆಯಿರುತ್ತದೆ. ಆದಕಾರಣ ಲಿಂಗವು ನಾದಬಿಂದುಕಲಾಯುಕ್ತವಾದುದಾಗಿಯೂ, ಶಿವಶಕ್ತ್ಯುಭಯಾತ್ಮಕವಾದುದಾಗಿಯೂ ಇದೆ. (ಸೂ. ಪ. ೬. ೪-೮)

(೩) ಜೀವ.

ಆ ಸಚ್ಚಿದಾನಂದಸ್ವರೂಪನಾದ ಶಿವನ ಅಂಶಗಳೇ ಅನಾದಿಯಾದ ಮಾಯೆಯ ಸಂಬಂಧದಿಂದ ಸ್ವಲ್ಪವಾದ ಸತ್ವರಜೋಗುಣಗಳುಳ್ಳವುಗಳಾಗಿ "ಜೀವ" ಎಂಬ ಹೆಸರನ್ನು ಹೊಂದವೆ. ಇವೇ ಭೋಕ್ತೃ. ಆ ಶಿವಚೈತನ್ಯವೇ ಸಂಪೂರ್ಣ ತಾಮಸಗುಣೋಪಾಧಿಯುಳ್ಳದ್ದಾಗಿ ವಿಷಯರೂಪವಾದ ಭೋಗ್ಯವಸ್ತುವಾಯಿತು. ಬೀಜದಲ್ಲಿ ವೊಳಕೆಯು ಹುದಿಗಿರುವಂತೆ ಜೀವನಲ್ಲಿ ಶಿವನು ತಾದಾತ್ಮ್ಯನಾಗಿರುತ್ತಾನೆ. (ಸಿ. ಸ. ೫. ೩೫-೩೬)

(೪) ಸಂಸಾರ.

ಅನಾದಿಯಾದ ಮಾಯೋಪಾಧಿಯು ಶುದ್ಧ (ವಿದ್ಯೆ) ವೆಂತಲೂ, ಅಶುದ್ಧ (ಅವಿದ್ಯೆ) ವೆಂತಲೂ ಎರಡು ಪ್ರಕಾರವಾಗಿದೆ. ಪರಮೇಶ್ವರನು ಶುದ್ಧಮಾಯಾವಿಶಿಷ್ಟನಾಗಿ ನಾನಾ ಲೀಲೆಗಳನ್ನು ಧರಿಸಿದನು. ಜೀವನು ಅಶುದ್ಧಮಾಯೆಯನ್ನಾಶ್ರಯಿಸಿ ಅಲ್ಪಜ್ಞನಾಗಿ ಶರೀರಾಭಿಮಾನದಿಂದ ಸಂಸಾರಚಕ್ರದಲ್ಲಿ ಸಿಲ್ಕಿದನು. (ಸಿ. ಪ. ೫. ೪೫-೪೮)

(೫) ದುಃಖ.

ಸಮುದ್ರದಲ್ಲಿ ತೆರೆಗಳು ಹೇಗೋ ಹಾಗೆ ಈ ಸಂಸಾರದಲ್ಲಿ ಹಸಿವೆ, ನೀರಡಿಕೆ, ಶೋಕ, ಮೋಹ, ಜನನ, ಮರಣಗಳೆಂಬ ತೆರೆಗಳಿವೆ. ಹಸಿವೆ ನೀರಡಿಕೆಗಳು ಪ್ರಾಣಧರ್ಮ. ಶೋಕಮೋಹಗಳು ಮನೋಧರ್ಮ. ಜನನ

ಮರಣಗಳು ದೇಹಧರ್ಮ. ಸಂಸಾರಸಮುದ್ರದಲ್ಲಿನ ಈ ಆರುತೆರೆಗಳು ಜೀವನಿಗೆ ದುಃಖವನ್ನುಂಟುಮಾಡುತ್ತಲಿವೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ವೈರಿಗಳು ಈ ತೆರೆಗಳಿಗೆ ಸಹಾಯಮಾಡು ತ್ತಲಿವೆ. ಜೀವನು ಇವುಗಳನ್ನು ಜಯಿಸಿ ಈ ತೆರೆಗಳಿಂದ ಪಾರಾಗಿ ಹೋದ ವಿನಾ ಆತನಿಗೆ ಮುಕ್ತಿ ದೊರೆಯುವುದಿಲ್ಲ. (ಪಾ. ೬. ೬೭-೭೨)

## (೬) ದುಃಖನಿವಾರಣೋಪಾಯ.

ಜೀವನಿಗೆ ಅವಿದ್ಯೆಯಿಂದುಂಟಾದ ಸಂಸಾರಸಮುದ್ರದಲ್ಲಿನ ಷಡ್ವಿಧ ದುಃಖಗಳು ನಿವಾರಣೆಯಾಗಬೇಕಾದರೆ ಆ ಜೀವನಿಗೆ ಪರಮಾತ್ಮನ ಸರ್ವ ಜ್ಞತಾ, ತೃಪ್ತಿ, ಅನಾದಿಬೋಧ, ಸ್ವತಂತ್ರತಾ, ನಿರಂತರ ಅಲುಪ್ತ ಶಕ್ತಿ ಮತ್ತು ಅನಂತಶಕ್ತಿ ಎಂಬ ಷಡಂಗಗಳ ಜ್ಞಾನವಾಗಬೇಕು. ಈ ಷಡಂಗ ಗಳ ಜ್ಞಾನವಾಗಬೇಕಾದರೆ ಮೊದಲು ಭಕ್ತಿ, ಕರ್ಮಕ್ಷಯ, ಬುದ್ಧಿ, ವಿಚಾರ, ದರ್ಪನಾಶ, ಮತ್ತು ಸಮ್ಯಜ್ಞಾನಗಳೆಂಬ ಷಡ್ವಿಧ ಉಪಾಂಗಗಳ ನ್ನರಿತುಕೊಳ್ಳಬೇಕು. ಜೀವನಿಗೆ ಪರಮಾತ್ಮನ ಈ ಭಕ್ತಿ ಮೊದಲಾದ ಉಪಾಂಗಗಳ ಜ್ಞಾನವುಂಟಾಗಬೇಕಾದರೆ ಆತನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಮತ್ತು ಐಕ್ಯ ಎಂಬ ಆರು ಸ್ಥಳಗಳನ್ನು ಒಂದೊಂ ದಾಗಿ ದಾಟಬೇಕು. ಆಗ ಜೀವನು ಷಟಸ್ಥಳಬ್ರಹ್ಮಿಯಾಗಿ ಸಂಸಾರಶರ ಧಿಯ ಷಡ್ವಿಧ ದುಃಖಗಳಿಂದ ಪಾರಾಗುವನು. (ಪಾ. ಪ. ೬. ೩೪-೪೩.)

## (೭) ಷಟಸ್ಥಳ ಜ್ಞಾನಸಾಧನ.

ಮನುಷ್ಯದೇಹಧಾರಿಯಾದ ಆ ಜೀವನಿಗೆ ಈ ಷಟಸ್ಥಳಗಳ ಜ್ಞಾನ ವಾಗುವುದಕ್ಕೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ, ಮಂತ್ರಗಳೆಂಬ ಅಷ್ಟಾವರ್ಣಗಳು, ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ ಮತ್ತು ಗಣಾಚಾರಗಳೆಂಬ ಪಂಚಾಚಾರಗಳು ಸಾಧನಗಳಾಗಿವೆ.

ವೀರಶೈವನಿಗೆ ಜ್ಞಾನ ಮತ್ತು ಯೋಗ ಇವೆರಡೂ ಸಾಧನಗಳಾಗಿವೆ. ಜ್ಞಾನದವಿನಾ ಯೋಗವಿಲ್ಲ. ಯೋಗದವಿನಾ ಜ್ಞಾನವಿಲ್ಲ. ಈ ಜ್ಞಾನ ಮತ್ತು ಯೋಗಗಳವಿನಾ ವೀರಶೈವಮತಕ್ಕೆ ಆಶ್ರಯವೇ ಇಲ್ಲ. (ಪಾ. ಪ. ೭. ೩೮-೩೯.)

## (೮) ದೀಕ್ಷೆ.

ಸ್ಥೂಲದೇಹದಲ್ಲಿ ಇಷ್ಟಲಿಂಗವನ್ನು ಧರಿಸುವುದಕ್ಕೋಸ್ಕರ ಮಾಡುವ ದೀಕ್ಷೆಯೇ ಕ್ರಿಯಾದೀಕ್ಷೆಯು. ಸೂಕ್ಷ್ಮದೇಹದಲ್ಲಿ ಪ್ರಾಣಲಿಂಗವನ್ನು ಸ್ಥಾಪಿಸಲು ಮಾಡುವ ದೀಕ್ಷೆಯೇ ಮನುದೀಕ್ಷೆಯು. ಕಾರಣದೇಹದಲ್ಲಿ ಭಾವಲಿಂಗವನ್ನು ನೆಲೆಗೊಳಿಸುವ ದೀಕ್ಷೆಯೇ ವೇಧಾದೀಕ್ಷೆಯು.

## (೯) ಷಟ್‌ಸ್ಥಳಿಗಳ ಲಕ್ಷಣ.

ಗುರುಲಿಂಗಜಂಗಮಗಳನ್ನು ಪೂಜಿಸುವಾತನೇ ಭಕ್ತನು. ಯೋಗಮಾರ್ಗದಿಂದ ಲಿಂಗಪೂಜೆಯನ್ನು ಮತ್ತು ಶಕ್ತಿಪೂರ್ವಕ ಜಂಗಮಪೂಜೆಯನ್ನು ತ್ರಿಕಾಲಗಳಲ್ಲಿಯೂ ಮಾಡುವಾತನೇ ಮಹೇಶನು. ಜಂಗಮಪೂಜೆಯನ್ನು ಮಾಡದೆ ಮತ್ತು ಲಿಂಗಕ್ಕರ್ಪಿಸದೆ ಯಾವಾತನು ಅನ್ನವನ್ನು ಸೇವಿಸುವುದಿಲ್ಲವೋ ಮತ್ತು ಲಿಂಗಾರ್ಪಿತವಾದ ಅನ್ನವನ್ನು ಎಂತಹ ಸಂಕಟ ಪ್ರಾಪ್ತವಾದರೂ ಬಿಡುವುದಿಲ್ಲವೋ ಆತನೇ ಪ್ರಸಾದಿಯು. ತನ್ನ ಪ್ರಾಣದ ವಿಷಯದಲ್ಲಿ ಎಷ್ಟು ಪ್ರೇಮವೋ ಅಷ್ಟೇ ಲಿಂಗದ ವಿಷಯದಲ್ಲಿಯೂ ಭಕ್ತಿಯುಳ್ಳವನಾಗಿ ಪ್ರಾಣ ಮತ್ತು ಲಿಂಗಗಳನ್ನು ಸಮಾನಬುದ್ಧಿಯಿಂದ ನೋಡುವಾತನೇ ಪ್ರಾಣಲಿಂಗಿಯು. ಯಾವಾತನು ಏಕಾಂತಸೇವನೆಯಿಂದ ನಿರಂತರ ಲಿಂಗಧ್ಯಾನಾಸಕ್ತನಾಗಿ ದಾರೇಷಣ, ಪುತ್ರೇಷಣ, ಮತ್ತು ಅರ್ಥೇಷಣಗಳೆಂಬ ಈಷಣತ್ರಯಗಳನ್ನು ತ್ಯಜಿಸಿರುತ್ತಾನೆಯೋ ಆತನೇ ಶರಣನು. ಯಾವಾತನು ಆಲಿಂಗವೇ ತಾನೆಂಬ ದೃಢಭಾವನೆಯುಳ್ಳವನಾಗುತ್ತಾನೆಯೋ ಆತನೇ ಐಕ್ಯನು.

ಈ ಸ್ಥಳಗಳಲ್ಲಿ ಹಿಂದಿನದನ್ನು ಬಿಟ್ಟು ಮುಂದಿನದನ್ನು ಆಚರಿಸುತ್ತಿರ ಬೇಕೆಂದು ತಿಳಿಯಬಾರದು. ಹಿಂದಿನದನ್ನನುಸರಿಸುತ್ತಲೇ ಮುಂದಣಸ್ಥಳದ ಆಚಾರವನ್ನಾಚರಿಸಬೇಕು. ಈಪ್ರಕಾರ ಯಾರು ಷಟಸ್ಥಳಗಳ ರಹಸ್ಯವ ನ್ನಂತು ಆಚರಿಸುತ್ತಾರೆಯೋ ಅವರು ಸಂಸಾರದುಃಖಗಳಿಂದ ಮುಕ್ತರಾಗು ತ್ತಾರೆ. (ಪಾ. ಪ. ೬. ೧೦-೨೯.)

## (೧೦) ಅಂಗಸ್ಥಳ.

ಈ ಮತದಲ್ಲಿ ಪರಮಾತ್ಮನಿಗೆ ಲಿಂಗವೆಂಬ ಸಂಜ್ಞೆಯು ಹೇಗುಂಟೋ ಹಾಗೆಯೇ ಜೀವನಿಗೆ ಅಂಗವೆಂಬ ಸಂಜ್ಞೆಯುಂಟು. ಆದುದರಿಂದ ಲಿಂಗಾಂ ಗಗಳೆಂದರೆ ಶಿವಜೀವರೆಂದೇ ತಿಳಿಯಬೇಕು. ಜೀವನು ಷಟಸ್ಥಳ ಬ್ರಹ್ಮಿ ಯಾಗಬೇಕಾದರೆ ಮೊದಲು ಅಂಗಸಂಬಂಧವಾದ ೪೪ ಸ್ಥಳಗಳನ್ನೂ ಅನಂ ತರ ಲಿಂಗಸಂಬಂಧವಾದ ೫೭ ಸ್ಥಳಗಳನ್ನೂ ಅಂತು ೧೦೧ ಸ್ಥಳಗಳನ್ನು ದಾಟಬೇಕು. ಅಂಗಸಂಬಂಧವಾದ ಭಕ್ತಸ್ಥಳದಲ್ಲಿ ೧೫, ಮಾಹೇಶ್ವರಸ್ಥಳ ದಲ್ಲಿ ೯, ಪ್ರಸಾದಿಸ್ಥಳದಲ್ಲಿ ೭, ಪ್ರಾಣಲಿಂಗಿಸ್ಥಳದಲ್ಲಿ ೫, ಶರಣ ಮತ್ತು ಐಕ್ಯ ಸ್ಥಳಗಳಲ್ಲಿ ನಾಲ್ಕು ನಾಲ್ಕು ಈ ಪ್ರಕಾರ ಒಟ್ಟು ೪೪ ಒಳಭೇದಗಳಿವೆ. ಇವುಗಳೆಲ್ಲಾ ಬೇರೆಬೇರೆ ನಾಮಕ್ರಿಯೆಗಳುಳ್ಳವುಗಳಾಗಿಯೇ ಇವೆ. ಇವು ಗಳನ್ನು ಸಂಪೂರ್ಣವಾಗಿ ಆಚರಿಸುವವನು ಜೀವನ್ಮುಕ್ತನಾಗುತ್ತಾನೆ.

## (೧೧) ಲಿಂಗಸ್ಥಳ.

ಆಬಳಿಕ ವಿದೇಹ ಕೈವಲ್ಯವಾಗುವವರೆವಿಗೂ ಆಚರಿಸಬೇಕಾದ ಧರ್ಮಗಳು ಲಿಂಗಸ್ಥಳಗಳಾದ ೫೭ ರಲ್ಲಿ ವಿವರಿಸಲ್ಪಟ್ಟಿವೆ. ಅವು ಲಿಂಗ ರೂಪನಾದ ಐಕ್ಯನು ಆಚರಿಸಬೇಕಾದ ಆಚರಣೆಗಳು. ಇವು ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಐಕ್ಯ ಈ ಐದು ಸ್ಥಳಗಳಲ್ಲಿ ಒಂಬೊಂ ಬತ್ತಾಗಿಯು, ಶರಣಸ್ಥಳದಲ್ಲಿ ಹನ್ನೆರಡಾಗಿಯು ಒಳಭೇದಗಳುಳ್ಳವುಗಳಾ ಗಿವೆ. ಜೀವನು ಈ ೫೭ ಸ್ಥಳಗಳನ್ನೂ ಆಚರಿಸಲು ಪರಮಾತ್ಮನಲ್ಲಿ ಬೆರತು ಹೋಗುತ್ತಾನೆ.

## (೧೨) ಲಿಂಗಪೂಜೆ.

ಸಕಲಪ್ರಾಣಿಗಳ ಮೂಲಾಧಾರದಲ್ಲಿ (ಗುದಸ್ಥಾನದಹತ್ತಿರ), ಹೃದಯಮಧ್ಯದಲ್ಲಿ ಮತ್ತು ಭ್ರೂಮಧ್ಯದಲ್ಲಿ (ಹುಬ್ಬುಗಳ ಮಧ್ಯಸ್ಥಾನದಲ್ಲಿ), ಲಿಂಗವು ಸುವರ್ಣ, ಹವಳ ಮತ್ತು ಸ್ಫಟಿಕಗಳ ಕಾಂತಿಯಿಂದ ಆಯಾಯ ಸ್ಥಾನಗಳಲ್ಲಿ ಪ್ರಕಾಶಿಸುತ್ತಿರುತ್ತದೆ. ಈ ಅಂತರ್ಲಿಂಗಾನುಸಂಧಾನಮಾಡುವುದಕ್ಕೋಸ್ಕರವಾಗಿಯೇ ಶಿಲಾದಿನಿರ್ಮಿತವಾದ ಬಾಹ್ಯಲಿಂಗವನ್ನು ಧರಿಸಬೇಕು. ಅದೇ ಇಷ್ಟಲಿಂಗವು. ಇದನ್ನು ಜಲಾಭಿಷೇಕ, ಪುಷ್ಪಗಂಧಾದಿಗಳಿಂದ ಪೂಜಿಸಬೇಕು. (ಸಿ. ಪ. ೬. ೩೪-೩೫)

ಹೃದಯಮಧ್ಯದಲ್ಲಿ ಅತ್ಯಂತ ಸೂಕ್ಷ್ಮವಾದ ಆಕಾಶವುಳ್ಳದ್ದಾಗಿಯೂ ಪ್ರಾಣವಾಯುವಿನಿಂದ ವ್ಯಾಪ್ತವಾಗಿಯೂ ಬ್ರಹ್ಮರಂಧ್ರದ ಪೂರ್ಣಚಂದ್ರ ಮಂಡಲದಲ್ಲಿರುವ ಅಮೃತಸೇವನೆಯಿಂದ ಬಲು ತಂಪಾಗಿಯೂ, ಶಿವಜ್ಞಾನ ಜ್ಯೋತಿಯಿಂದ ಬೆಳಗುವಂಥಾದ್ದಾಗಿಯೂ ಇರುವುದೇ ಪ್ರಾಣಲಿಂಗವು. ಇದನ್ನು ಶಾಂತಿಯೆಂಬ ಜಲದಿಂದ ಅಭಿಷೇಕಮಾಡಿ ನಿತ್ಯಾನಿತ್ಯವಸ್ತುವಿಚಾರವೆಂಬ ವಸ್ತ್ರದಿಂದಲು, ಸತ್ಯವೆಂಬ ಆಭರಣದಿಂದಲು, ವೈರಾಗ್ಯವೆಂಬ ಪುಷ್ಪಮಾಲೆಯಿಂದಲು, ಚಿತ್ತೈಕಾಗ್ರತೆಯೆಂಬ ಗಂಧದಿಂದಲು, ನಿರಹಂಕಾರವೆಂಬ ಅಕ್ಷತೆಯಿಂದಲು ಭೂಷಣಗೊಳಿಸಿ, ಶ್ರದ್ಧೆಯೆಂಬ ಧೂಪದಿಂದಲು, ಮಹಾಜ್ಞಾನವೆಂಬ ದೀಪದಿಂದಲು ಪೂಜೆಮಾಡಬೇಕು. ಇದೇ ಪ್ರಾಣಲಿಂಗಪೂಜೆಯು. (ಸಿ. ಪ. ೧೨. ೧೩-೧೮)

ಸ್ಥೂಲಸೂಕ್ಷ್ಮಗಳೆಂಬ ಈ ಇಷ್ಟಪ್ರಾಣಲಿಂಗಗಳು ಭಕ್ತನಿಂದ ಕಲ್ಪಿತವಾದವುಗಳಾಗಿವೆ. ಆದಕಾರಣ ಇವುಗಳನ್ನು ಮೀರಿ ಜೀವನು ಪರಬ್ರಹ್ಮಮಯವಾದ ಆ ಪರಲಿಂಗ ( ತೃಪ್ತಿಲಿಂಗ-ಜ್ಞಾನಲಿಂಗ ) ವನ್ನು ಹೊಂದಿದರೆ ಆತನು ಮುಕ್ತನೇ ಆಗುವನು. (ಸಿ. ಪ. ೧೫. ४೬-೫೦.)

## (೧೩) ಲಿಂಗಾಂಗಸಾಮರಸ್ಯ.

ಆ ಶಕ್ತಿವಿಶಿಷ್ಟ ಪರಶಿವನಿಗೆ ಪೂಜ್ಯಪೂಜಕ ಲೀಲೆಯುಂಟಾಗಿ ಅಧಿಕಭಾವ ಮತ್ತು ನ್ಯೂನಭಾವಗಳೆಂದು ಆತನು ಎರಡುಪ್ರಕಾರನೆನಿಸಿದನು.

ಆ ಅಧಿಕ ಭಾವಾಪನ್ನವಾಗಿರತಕ್ಕ ಶಕ್ತಿವಿಶಿಷ್ಟ ಶಿವತತ್ವವೇ ಲಿಂಗಸ್ಥಳ ವೆನಿಸಿತು. ಆನ್ಯೂನೀಭಾವಾಪನ್ನವಾಗಿರತಕ್ಕ ಶಕ್ತಿ ವಿಶಿಷ್ಟ ಶಿವತತ್ವವೇ ಅಂಗಸ್ಥಳವೆನಿಸಿತು.

ಅನಂತರ ಲಯ, ಭೋಗ, ಅಧಿಕಾರಗಳೆಂಬ ಮೂರು ವ್ಯಾಪಾರ ಗಳನ್ನು ಪೂರ್ತಿಮಾಡುವುದಕ್ಕೋಸ್ಕರ ಅಧಿಕಭಾವಾಪನ್ನವಾದ ಲಿಂಗಸ್ಥ ಳವು ಅನುಕ್ರಮವಾಗಿ ಭಾವ, ಪ್ರಾಣ, ಮತ್ತು ಇಷ್ಟ ಲಿಂಗಸ್ಥಳಗಳೆಂದು ಮೂರು ಪ್ರಕಾರ ವಾಯಿತು.

ಇದರಂತೆಯೇ ನ್ಯೂನೀಭಾವಾಪನ್ನವಾಗಿರತಕ್ಕ ಅಂಗಸ್ಥಳವು ಲಯ, ಭೋಗ, ಅಧಿಕಾರಗಳೆಂಬ ಮೂರು ವ್ಯಾಪಾರಗಳನ್ನು ಪೂರ್ತಿಮಾಡುವುದ ಕ್ಕೋಸ್ಕರ ಅನುಕ್ರಮವಾಗಿ **ಯೋಗಾಂಗ, ಭೋಗಾಂಗ,** ಮತ್ತು **ತ್ಯಾಗಾಂಗ** ಸ್ಥಳಗಳೆಂದು ಮೂರು ಪ್ರಕಾರವಾಯಿತು.

ಬಳಿಕ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗಗಳೆಂಬ ಈ ಮೂರು ಲಿಂಗಸ್ಥಳಗಳು ಮತ್ತು ಯೋಗಾಂಗ, ಭೋಗಾಂಗ, ತ್ಯಾಗಾಂಗಗಳೆಂಬ ಈ ಮೂರು ಅಂಗಸ್ಥಳಗಳು ಶಿವಶಕ್ತ್ಯಾತ್ಮಕಗಳಾಗಿಯೇ ಇರುವುದರಿಂದ ಆ ಶಿವಸಂಬಂಧವಾದ ಆಚಾರವೆನಿಸಿದ ಜ್ಞಾನಾಚಾರವನ್ನೂ ಆಶಕ್ತಿಸಂಬಂಧ ವಾದ ಆಚಾರವೆನಿಸಿದ ಕ್ರಿಯಾಚಾರವನ್ನೂ ಪೂರ್ತಿಮಾಡುವುದಕ್ಕೋಸ್ಕರ ಆ ಮೂರು ಲಿಂಗಸ್ಥಳಗಳು ಮತ್ತು ಆ ಮೂರು ಅಂಗಸ್ಥಳಗಳು ಪ್ರತಿಯೊಂದು ಎರಡೆರಡು ಪ್ರಕಾರಗಳಾದವು.

**ಭಾವಲಿಂಗವು** — ಮಹಾಲಿಂಗವೆಂದು, ಪ್ರಸಾದಲಿಂಗವೆಂದು, **ಪ್ರಾಣಲಿಂಗವು**—ಜಂಗಮಲಿಂಗವೆಂದು, ಶಿವಲಿಂಗವೆಂದು, **ಇಷ್ಟಲಿಂಗವು**—ಗುರುಲಿಂಗವೆಂದು, ಆಚಾರಲಿಂಗವೆಂದು, ಎರಡೆರಡು ಪ್ರಕಾರಗಳಾದಂತೆಯೇ **ಯೋಗಾಂಗವು**— ಐಕ್ಯಸ್ಥಳವೆಂದು, ಶರಣಸ್ಥಳವೆಂದು, **ಭೋಗಾಂಗವು**-ಪ್ರಾಣಲಿಂಗಿಸ್ಥಳವೆಂದು, ಪ್ರಸಾದಿಸ್ಥಳವೆಂದು, **ತ್ಯಾಗಾಂಗವು**—ಮಹೇಶನೆಂದು, ಭಕ್ತನೆಂದು, ಎರಡೆರಡು ಪ್ರಕಾರಗಳಾದವು.

ಆದಕಾರಣ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂಬ ಆರುಲಿಂಗಸ್ಥಳಗಳು, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನೆಂಬ ಆರು ಅಂಗಸ್ಥಳಗಳು ಉಂಟಾದವು.

ಲಿಂಗಸ್ಥಳವನ್ನು ಆಶ್ರಯಿಸಿರುವ ಶಿವನಅಂಶವು ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಸಾದಾಖ್ಯ, ಅಮೂರ್ತಸಾದಾಖ್ಯ, ಶಿವಸಾದಾಖ್ಯ, ಮಹಾಸಾದಾಖ್ಯಗಳೆಂತಲು ಮತ್ತು ಆ ಲಿಂಗಸ್ಥಳವನ್ನಾಶ್ರಯಿಸಿರುವ ಶಕ್ತಿಯಅಂಶವು ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯತೀತಾಕಲೆ, ಶಾಂತ್ಯತೀತೋತ್ತರ ಕಲೆಗಳೆಂತಲು ಹೇಳಿಸಿಕೊಂಡವು.

ಅಂಗಸ್ಥಳವನ್ನು ಆಶ್ರಯಿಸಿರುವ ಶಿವನಅಂಶವು ವರ್ಣಾಧ್ವ, ಪದಾಧ್ವ, ಮಂತ್ರಾಧ್ವ, ತತ್ವಾಧ್ವ, ಕಲಾಧ್ವ, ಭುವನಾಧ್ವಗಳೆಂತಲು ಮತ್ತು ಆ ಅಂಗಸ್ಥಳವನ್ನಾಶ್ರಯಿಸಿರುವ ಶಕ್ತಿಯಅಂಶವು ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ, ಸಮರಸಭಕ್ತಿಗಳೆಂತಲು ಹೇಳಿಸಿಕೊಂಡವು.

ಆದುದರಿಂದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಈ ಆರು ಅಂಗಗಳು ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ, ಸಮರಸಭಕ್ತಿಗಳೆಂಬ ಆರುಭಕ್ತಿಗಳೊಡನೆಕೂಡಿ ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯತೀತಾಕಲೆ, ಶಾಂತ್ಯತೀತೋತ್ತರಕಲೆಗಳೆಂಬ ಷಟ್ಕಲೆಗಳಿಂದಕೂಡಿರುವ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಿಲಿಂಗ, ಮಹಾಲಿಂಗಗಳೆಂಬ ಈ ಆರುಲಿಂಗಗಳನ್ನು ಚಿತ್ತ, ಬುದ್ಧಿ, ಮನಸ್ಸು, ಅಹಂಕಾರ, ಜ್ಞಾನ, ಭಾವ-ಗಳೆಂಬ ಆರು ಹಸ್ತಗಳಿಂದ ಪೂಜಿಸಿ ಗಂಧ, ರಸ, ರೂಪು, ಸ್ಪರ್ಶ, ಶಬ್ದ, ಪರಿಣಾಮಗಳೆಂಬ ಆರು ಪದಾರ್ಥಗಳನ್ನು

ಆ ಆರು ಲಿಂಗಗಳಿಗೆ ಸಮರ್ಪಿಸಿ ಅವುಗಳ ಪ್ರಸಾದವನ್ನು ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯಗಳೆಂಬ ಆರು ಮುಖಗಳಿಂದ ತಾನು ಸ್ವೀಕರಿಸಿ ಭಕ್ತಿ, ಕರ್ಮಕ್ಷಯ, ನಿರ್ಮಲಮತಿ, ವಿಚಾರ, ದರ್ಪಸಂಕ್ಷಯ, ಸಮ್ಯಜ್ಞಾನಗಳೆಂಬ ಆರು ಸಿದ್ಧಿಗಳನ್ನುಹೊಂದಿ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಆತ್ಮಗಳೆಂಬ ಈ ಆರು ತತ್ವಗಳನ್ನು ಮೀರಿ ಮೂವತ್ತಾರನೆಯ ತತ್ವವಾದ ಆ ಶಿವತತ್ವದಲ್ಲಿ ಬೆರೆಯುವುದೇ ಲಿಂಗಾಂಗ ಸಾಮರಸ್ಯವು. [ ಈ ವಿಷಯವು ಸದ್ಗುರುಗಳಿಂದ ವಿವರವಾಗಿ ಬೋಧಿಸಲ್ಪಟ್ಟನಂತರವೇ ವೇದ್ಯವಾಗ ತಕ್ಕುದಾಗಿದೆ. ]

## (೧೪) ಮುಕ್ತಿ.

ವೀರಶೈವನು ತನ್ನ ಭಕ್ತಿ, ಕ್ರಿಯಾಜ್ಞಾನ, ವೈರಾಗ್ಯಗಳ ತಾರತಮ್ಯದ ಮೇಲಿಂದ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಮತ್ತು ಕೈವಲ್ಯಗಳೆಂಬ ಬೇರೆಬೇರೆ ಮುಕ್ತಿಗಳನ್ನು ಹೊಂದುತ್ತಾನೆ. ಇವು ಕ್ರಮದಿಂದ ಒಂದಕ್ಕಿಂತ ಒಂದು ಶ್ರೇಷ್ಠವಾದವುಗಳಾಗಿವೆ.

(ಪಾ. ಪ. ೧೯. ೧೯-೨೦.)

## (೧೫) ಅಧಿಕಾರ.

ಶಿವಭಕ್ತಿಯುಳ್ಳ ಯಾವ ಮನುಷ್ಯನಾದರೂ-ಆತನು ಅಂತ್ಯಜಾದಿ ಯಾವಕುಲದಲ್ಲಿಯೇ ಹುಟ್ಟಿರಲಿ- ಈ ಮತದಲ್ಲಿ ಸೇರಿ ಮುಕ್ತನಾಗಬಹುದು.

(ಪಾ. ಪ. ೧. ೫೮-೬೨)

ಈ ಮತವನ್ನನುಸರಿಸಿದನಂತರ ಆತನ ಹಿಂದಣ ಜನ್ಮ ಕುಲಾದಿಗಳೆಲ್ಲಾ ನಷ್ಟವಾಗುವುದರಿಂದ ಆತನಲ್ಲಿ ಯಾವ ಭಿನ್ನಭೇದಗಳನ್ನೂ ಮಾಡಬಾರದು.

(ಸೂ. ಪ. ೫. ೬೩-೬೬)

ಈ ನಿಯಮಗಳು ಪುರುಷರಿಗೆಮಾತ್ರವೇಅಲ್ಲ ; ಸ್ತ್ರೀಯರಿಗೂ ಅನ್ವಯಿಸಿವೆ.

ಈ ಮತದಲ್ಲಿ ಕೇವಲ ಕ್ರಿಯಾಭೇದದಿಂದ ಸಾಮಾನ್ಯ, ವಿಶೇಷ, ನಿರಾಭಾರಿಗಳೆಂಬ ಮೂರು ಭೇದಗಳಿವೆಯೇವಿನಾ ಜನ್ಮದಿಂದ ನ್ಯೂನಾಧಿಕ ಭೇದಗಳಿಲ್ಲ. ಆದುದರಿಂದ ಈ ಮತಾನುಯಾಯಿಗಳಲ್ಲಿ ಯಾರಾದರೂ ತಮ್ಮ ತಮ್ಮ ಭಕ್ತಿಕ್ರಿಯಾಜ್ಞಾನ ವೈರಾಗ್ಯಾದಿಗಳಿಂದ ಷಟಸ್ಥಳಜ್ಞಾನಿಗಳಾಗಬಹುದು. (ಸಿ. ಪ. ೫. ೨೨-೨೩.) (ಪಾ. ಪ. ೧೫-೩೨)

## (೧೬) ಆಚಾರ.

(೧) ವೀರಶೈವರಾದ ಸ್ತ್ರೀಪುರುಷರು ಪ್ರತಿನಿತ್ಯ ಸ್ನಾನದಿಂದಶುಚಿರ್ಭೂತರಾಗಿ ತಮ್ಮ ಇಷ್ಟಲಿಂಗ ಪೂಜೆಯನ್ನು ಮಾಡಲೇಬೇಕು.

(೨) ಇಷ್ಟಲಿಂಗದ ವಿನಾ ಇನ್ನಾವ ದೇವರನ್ನೂ ಪೂಜಿಸಬಾರದು.

(೩) ಇಷ್ಟಲಿಂಗಕ್ಕರ್ಪಿಸದೆ ಯಾವುದನ್ನೂ ಸೇವಿಸಬಾರದು.

(೪) ಇಷ್ಟಲಿಂಗವನ್ನು ಯಾವಕಾಲದಲ್ಲಿಯೂ ಅಗಲಿರಬಾರದು.

(೫) ವೀರಶೈವನು ಕೇವಲ ಶಾಕಾಹಾರಿಯಾಗಿರಬೇಕು. ಮದ್ಯ, ಮಾಂಸ, ಭಂಗಿಗಳನ್ನು ಸೇವಿಸಕೂಡದು.

(೬) ಲಿಂಗಾಂಗಿಗಳಲ್ಲದವರಲ್ಲಿ ಊಟಮಾಡಬಾರದು. ಮತ್ತು ಅವರು ಮುಟ್ಟಿದ ನೀರನ್ನುಕೂಡಾ ಕುಡಿಯಬಾರದು.

(೭) ಜಾತಿಸೂತಕ, ಜನನಸೂತಕ, ಪ್ರೇತಸೂತಕ, ಉಚ್ಚಿಷ್ಟಸೂತಕ, ಮತ್ತು ಪ್ರಜಾಸೂತಕಗಳೆಂಬ ಪಂಚಸೂತಕಗಳನ್ನಾಚರಿಸಬಾರದು.

(೮) ಏಕಭುಕ್ತ, ಚಾಂದ್ರಾಯಣಾದಿ ವ್ರತೋಪವಾಸಗಳನ್ನು ಮಾಡಬಾರದು.

(೯) ಹಿಂಸಾಯುಕ್ತ ಕರ್ಮ ಯಜ್ಞವನ್ನು ವೀರಶೈವನು ಆಚರಿಸಬಾರದು. ಕೇವಲ ಧ್ಯಾನ ಮತ್ತು ಜ್ಞಾನಯಜ್ಞ ನಿರತನಾಗಿರಬೇಕು.

(ಸೂ. ೭. ೩೨-೪೦)

(೧೦) ಸ್ತ್ರೀಯರು ಲಿಂಗಾರ್ಚನಾವ್ರತವನ್ನು ಹಿಡಿದಿರುವುದರಿಂದಲು, ಲಿಂಗಾರ್ಪಿತವಿಲ್ಲದೆ ಊಟಮಾಡುವುದಕ್ಕೆ ಬರುವುದಿಲ್ಲವಾದುದರಿಂದಲು ರಜಸ್ವಲೆಯರಾದಾಗಲುಕೂಡಾ ಲಿಂಗಾರ್ಚನೆಯನ್ನು ಮಾಡಲೇಬೇಕು.

(೧೧) ಸ್ತ್ರೀಯರು ಪುನರ್ವಿವಾಹವನ್ನು ಮಾಡಿಕೊಳ್ಳಬಾರದು.

(ಪಾ. ಪ. ೧೯. ಶ್ಲೋ. ೧೧೧.)

(೧೨) ಖನನ ಮೂಲಕ ಅಂತ್ಯವಿಧಿಯನ್ನಾಚರಿಸಬೇಕು.

ಈ ವೀರಶೈವ ಮತತತ್ವಗಳನ್ನು ವಿವರವಾಗಿ ತಿಳಿದು ಕೊಳ್ಳಬೇಕೆಂದಪೇಕ್ಷಿಸುವವರು ಪಾರಮೇಶ್ವರಾಗಮ, ಸೂಕ್ಷ್ಮಾಗಮ, ವಾತುಲಾಗಮ ಮೊದಲಾದ ಶಿವಾಗಮಗಳನ್ನು, ಲಿಂಗಧಾರಣಚಂದ್ರಿಕಾ, ಕ್ರಿಯಾಸಾರ, ವೀರಶೈವಾಚಾರ ಕೌಸ್ತುಭ, ವೀರಶೈವ ಪ್ರಕಾಶಿಕಾ, ಮೊದಲಾದ ಉದ್ಗ್ರಂಥಗಳನ್ನು ಅವಲೋಕಿಸಬೇಕು. ಇಷ್ಟು ಗ್ರಂಥಗಳನ್ನೆಲ್ಲಾ ಓದುವುದು ಯಾರಿಗೆಸಾಧ್ಯವಿಲ್ಲವೋ ಅವರು ಶ್ರೀ ಶಿವಾಚಾರ್ಯರಿಂದ ರಚಿಸಲ್ಪಟ್ಟು ಕೈ. ವಿದ್ವಾನ್ ಎನ್. ಆರ್. ಕರಿಬಸವಶಾಸ್ತ್ರಿಗಳವರಿಂದ ಕನ್ನಡದಲ್ಲಿ ಅತ್ಯುತ್ತಮವಾಗಿ ವ್ಯಾಖ್ಯಾನಮಾಡಲ್ಪಟ್ಟಿರುವ ಸಿದ್ಧಾಂತ ಶಿಖಾಮಣಿ * ಎಂಬ ಗ್ರಂಥವನ್ನಾದರೂ ಓದಿದರೆ ಈ ಮತದ ತತ್ವಗಳು ಎಷ್ಟೋಮಟ್ಟಿಗೆ ವಿವರವಾಗಿಯೇ ತಿಳಿಯುವುವು.

---

* ಈ ಗ್ರಂಥವು " ಮೈಸೂರು ಸ್ಟಾರ್ " ಪತ್ರಿಕಾಸಂಪಾದಕರಲ್ಲಿ ದೊರೆಯುತ್ತದೆ.

## ೫ ನೆಯ ಪ್ರಕರಣ.

## ಮತ ಪ್ರಸಾರ.

---

ಶ್ರೀ ವಿದ್ಯಾರಣ್ಯರು ಹುಕ್ಕಬುಕ್ಕರಿಗೂ, ಶ್ರೀ ರಾಮದಾಸರು ಶಿವಾಜಿ ಮಹಾರಾಜರಿಗೂ ಹೇಗೆ ಸಹಾಯಕರಾಗಿದ್ದರೋ ಹಾಗೆಯೇ ಶ್ರೀ ಜಾತವೇದಿಮುನಿಗಳು ಬಸವಣ್ಣನವರಿಗೆ ಸಹಾಯಕರಾಗಿದ್ದರೆಂದು ಹೇಳಬಹುದು. ಆದರೆ ಆ ಉಭಯ ಯತಿಗಳೂ ಸ್ವರಾಜ್ಯ ಸ್ಥಾಪನೆಮಾಡಿಸಿ ಧರ್ಮರಕ್ಷಣೆಯನ್ನು ಮಾಡಿಸಿದರು. ಈ ಜಾತವೇದಿಮುನಿಗಳಾದರೋ ಬಸವಣ್ಣನವರಿಂದ ರಾಜ್ಯಸೂತ್ರವನ್ನು ಹಿಡಿಸಿ ವೀರಶೈವಮತವನ್ನು ಪ್ರಸಾರಮಾಡಿಸಿದರು. ಈ ಪುಣ್ಯಭೂಮಿಯಾದ ಭರತಖಂಡದಲ್ಲಿ ಮತೋದ್ಧಾರವನ್ನು ಮಾಡಿರುವ ಮಹಾ ಮಹಾ ವಿಭೂತಿಗಳ ಮಾರ್ಗವೇ ಒಂದು ವಿಧವಾಗಿದ್ದರೆ ಈ ನಮ್ಮ ಬಸವಣ್ಣನವರ ಮಾರ್ಗವೇ ಇನ್ನೊಂದುವಿಧವಾಗಿದೆ. ಭಗವಾನ್ ಗೌತಮ ಬುದ್ಧ ಮತ್ತು ಮಹಾತ್ಮ ಮಹಾವೀರ ಈ ರಾಜಪುತ್ರರು ತಮ್ಮ ರಾಜ್ಯವನ್ನೇ ಬಿಟ್ಟು ಕೇವಲ ಸನ್ಯಾಸಿಗಳಾಗಿ ದೇಶಸಂಚಾರಮಾಡುತ್ತ ಬೌದ್ಧ ಮತ್ತು ಜೈನ ಮತಗಳನ್ನು ಪ್ರಸಾರಗೊಳಿಸಿದಂತೆಯೇ ಶ್ರೀ ಶಂಕರಾಚಾರ್ಯ, ಶ್ರೀ ರಾಮಾನುಜಾಚಾರ್ಯ, ಶ್ರೀ ಮಧ್ವಾಚಾರ್ಯ ಮೊದಲಾದ ಅನೇಕ ಮಹಾಮಹಾ ಆಚಾರ್ಯರೂ ಕೂಡಾ ಸನ್ಯಾಸವನ್ನು ವಹಿಸಿ ಜನಗಳಿಗೆ ಬೋಧಿಸುತ್ತ ದೇಶಸಂಚಾರ ಮಾಡಿಯೇ ತಮ್ಮ ತಮ್ಮ ಮತಗಳನ್ನು ಪ್ರಸಾರ ಮಾಡಿದ್ದಾರಷ್ಟೆ. ಆದರೆ ಈ ಮಹಾನುಭಾವರು ಒಂದು ರಾಜ್ಯಾಧಿಕಾರವನ್ನು ಸಂಪಾದಿಸಿ ಗೃಹಸ್ಥಾಶ್ರಮವನ್ನು ವಹಿಸಿ ಒಂದು ಸ್ಥಳದಲ್ಲಿಯೇ ಇದ್ದು ಮತವನ್ನು ಪ್ರಸಾರಮಾಡಿದರು. ಮತಪ್ರಸಾರಕ್ಕೋಸ್ಕರ ಬಸವಣ್ಣನವರು ಅನ್ಯಸ್ಥಳಗಳಿಗೆ ಹೋಗಿಲ್ಲ. ಇಷ್ಟೇ ಅಲ್ಲ ; ಸ್ವಸ್ಥಳದಲ್ಲಾದರೂ ಮಾಮಾಂ

ಸಕಾಚಾರ್ಯನಾದ ಶ್ರೀಧರಪಂಡಿತನವಿನಾ ಇನ್ನಾವ ಮಹಾ ಪಂಡಿತರಸಂಗಡ ಮತಚರ್ಚೆಯನ್ನು ನಡೆಯಿಸಿದಂತೆಯೂ ಕಾಣುವುದಿಲ್ಲ. ಎಂದಮೇಲೆ ಮತಪ್ರಸಾರವು ಹೇಗೆ ಮಾಡಲ್ಪಟ್ಟಿತೆಂಬಂಶವು ವಿಚಾರಾರ್ಹ ವಾದುದಲ್ಲವೇ ?

ಬೌದ್ಧ ಮತವನ್ನು ಪ್ರಸಾರಮಾಡಲು ಅಶೋಕರಾಜನು ಹೇಗೆ ಸಹಾಯಕನಾಗಿದ್ದನೋ ಹಾಗೆ ಶ್ರೀ ಬಸವಣ್ಣನವರಿಗೆ ಬಿಜ್ಜಳರಾಜನೇನಾದರೂ ಸಹಾಯಕನಾಗಿದ್ದನೇ ? ಇಲ್ಲವೇ ಇಲ್ಲ. ರಾಜನು ಜೈನಮತಾವಲಂಬಿಯಾಗಿದ್ದುದರಿಂದ ಬಸವಣ್ಣನವರ ಈ ವೀರಶೈವಮತಪ್ರಸಾರ ಕಾರ್ಯಕ್ಕೆ ವಿರೋಧಿಯಾಗಿಯೇ ಇದ್ದನು ರಾಜನ ಸಹಾಯವಿಲ್ಲದಿದ್ದರೂ ಆ ರಾಜಧಾನಿಯ ಸಕಲಜನರ ಸಹಾನುಭೂತಿಯಾದರೂ ಇದ್ದಿತೇ? ಅದೂ ಇಲ್ಲ, ಇಷ್ಟೇ ಅಲ್ಲ ; ಪ್ರಬಲತರವಾದ ವಿರೋಧವೇ ದಿನೇ ದಿನೇ ಹೆಚ್ಚುತ್ತಾ ಇದ್ದಿತೆಂದು ತೋರುತ್ತದೆ. ಈ ವಿಷಯವಾಗಿ ಸಿಂಗಿರಾಜ ಪುರಾಣದ ೧೯ನೆಯ ಸಂಧಿಯಲ್ಲಿ ಈ ಪ್ರಕಾರ ಹೇಳಲ್ಪಟ್ಟಿದೆ—"ಮಂಚಿಯಹರಿಭಟ್ಟ (ಕೊಂಡೆಯ ಮಂಚಣ್ಣ), ದಾಮೋದರ, ಪೆದ್ದಿಭಟ್ಟ, ಅಜಕುಂಡಲನೇಮಿ, ರಾಘವ, ಶಿಖಾಸೂತ್ರದಪ್ಪರಸ, ಅಣ್ಣಪ್ಪ, ಉಪಾಧ್ಯರ ವಲ್ಲಭ, ಸಾಮವೇದಪ್ಪಣ್ಣ, ಜನ್ನಪಂಡಿತ, ಪಿರಿಯಸೋಮುಪಾಧ್ಯ, ಚತುರ್ವೇದಿ ಕೃಷ್ಣರಸ, ಕವಿಯರಾಮಣ್ಣ, ಯಜ್ಞದಸಂಗಭಟ್ಟ, ಕೂಚಿಭಟ್ಟ, ಕಾಳಿಮರಸ, ಕೇಶವ, ದುಷ್ಟನಾಚಿರಾಜ, ಖಚಪ, ಹೆಗ್ಗಡೆಯಶರೆಯಬಾಚರಸ, ಹೆಮ್ಮಾರಿಕರಿಯಮಾಧವ, ಚೋಳಿಮಾಂಕ, ಕಲೆಯಪೋಚರಸ, ಗೋಪಾಲಪೆದ್ದಿ, ಮೇಳೀ ಮೂರ್ಖರಾಚರಸ, ಧೂರ್ತವಿಟ್ಟರಸ, ಇವರೇ ಮೊದಲಾದ ಮೂವತ್ತಾರುಜನ ಕೊಂಡಿಯವರು (ಚಾಡಿಕೋರರು) ಬಿಜ್ಜಳರಾಜನ ಸಭೆಯಲ್ಲಿದ್ದರು." ಈ ಹೆಸರುಗಳ ಮೇಲಿಂದ ಅನೇಕ ಬ್ರಾಹ್ಮಣರೂ, ಜೈನರೂ, ಬಸವಣ್ಣನವರಿಗೆ ವಿರೋಧಿಗಳಾಗಿ ರಾಜಸಭೆಯಲ್ಲಿಯೇ ಇದ್ದರೆಂದು ತೋರುತ್ತದೆ.

ಈ ಪ್ರಕಾರ ರಾಜನು ಮತ್ತು ರಾಜಸಭೆಯ ಕೆಲವುಪ್ರಮುಖರು ವಿರೋಧಿಗಳಾಗಿದ್ದರೂ **ಹಜರತ್ ಮುಹಮ್ಮದ ಪೈಗಂಬರರು** ಹೇಗೆ ಕೊನೆಗೆ ಶಸ್ತ್ರಬಲದಿಂದ ತಮ್ಮ ಮತವನ್ನು ಪ್ರಸಾರಮಾಡಿದರೋ ಹಾಗೆ ಬಸವಣ್ಣನವರೇನಾದರೂ ತಮ್ಮಲ್ಲಿದ್ದ ಮುಖ್ಯ ರಾಜ್ಯಸೂತ್ರದ ಸಹಾಯದಿಂದ ಶಸ್ತ್ರವನ್ನು ಹಿಡಿದು ಮತಪ್ರಸಾರಮಾಡಿದರೆ ? ಇಲ್ಲವೇ ಇಲ್ಲ. **ಸಾಧುವರ್ಯ ಯೇಸುಕ್ರಿಸ್ತನು** ತನ್ನ ಮತವನ್ನೇನೋ ಬೋಧಿಸಿದನು. ಆದರೆ ಆತನ ಅಂತ್ಯಕಾಲದವರೆಗೂ ಹನ್ನೆರಡೇಜನರುಮಾತ್ರ ಆತನ ಶಿಷ್ಯರಾಗಿದ್ದು ಅನಂತರ ಹೇಗೆ ಕ್ರೈಸ್ತಮತವು ಪ್ರಸಾರವಾಯಿತೋ ಹಾಗೆ ಈ ಮಹಾನುಭಾವರು ಪ್ರಸಾರಮಾಡಿದ ಈ ವೀರಶೈವಮತವು ಅವರಿರುವವರೆಗೂ ನಾಮಮಾತ್ರದಲ್ಲಿದ್ದು ಅನಂತರವೇ ಪ್ರಬಲವಾಗಿ ವ್ಯಾಪಿಸಿತೆಂದು ಯೋಚಿಸಬಹುದೇ ? ಹಾಗೆ ಹೇಳಲಿಕ್ಕೂ ಆಗುವುದಿಲ್ಲ. ಏಕೆಂದರೆ, ಈ ವಿಷಯವಾಗಿ ಸಿಂಗಿರಾಜ ಪುರಾಣದ ೧೫ನೆಯ ಸಂಧಿಯಲ್ಲಿ ಈ ಪ್ರಕಾರಇದೆ. “ ಶಿವಭಕ್ತಸ್ಥಳದವರು ೨೮ ಸಾವಿರ ವೀರಭಕ್ತಸ್ಥಳದವರು ೪೦ ಸಾವಿರ. ವೀರವೇದಾಂತಿಸ್ಥಳದವರು ೩೬ ಸಾವಿರ. ಸಿದ್ಧಾಂತಿಗಳು ೨೧ ಸಾವಿರ. ಷಟಸ್ಥಳಸೂತ್ರವನ್ನು ಕೈಕೊಂಡವರು ೧೨ ಸಾವಿರ. ಷಟಸ್ಥಳ ಬ್ರಹ್ಮಿಗಳು ೬ ಸಾವಿರ. ಶಿವಯೋಗಿಗಳು ೩ ಸಾವಿರ. ಅಂತು ಒಂದು ಲಕ್ಷ ೯೬ ಸಾವಿರ ಪ್ರಮಥರಿಗೂ ಬಸವಣ್ಣನವರು ಪ್ರತಿನಿತ್ಯ ಲಿಂಗಾರ್ಚನೆಯನ್ನು ಮಾಡಿಸುತ್ತಿದ್ದರು. ” ವಿಜಯನಗರದಲ್ಲಿ ಸಾಧಾರಣ ಮೂವತ್ತುಲಕ್ಷ ಜನಸಂಖ್ಯೆಯಿದ್ದಿತೆಂದು ಇತಿಹಾಸಜ್ಞರೆಲ್ಲರೂ ಹೇಳುತ್ತಿದ್ದಾರಷ್ಟೆ. ಎಂದಮೇಲೆ ಆ ಕಾಲದಲ್ಲಿ ವಿಜಯನಗರದಷ್ಟೇ ಪ್ರಸಿದ್ಧಿಯನ್ನುಹೊಂದಿ ಉ. ಲ. ದ. ೧೦ ಮೈಲು ವಿಸ್ತಾರವುಳ್ಳದ್ದಾಗಿದ್ದ ಆ ಘನತರವಾದ ಕಲ್ಯಾಣಪಟ್ಟಣದಲ್ಲಿ ೮-೧೦ ಲಕ್ಷವಾದರೂ ಜನಸಂಖ್ಯೆಯಿದ್ದಿತೆಂದು ಹೇಳಲು ಅಭ್ಯಂತರವೇನು ? ಅಂತಹ ದೊಡ್ಡಪಟ್ಟಣದಲ್ಲಿ ಸಾಧಾರಣ ಎರಡುಲಕ್ಷ ವೀರಶೈವರಿದ್ದರೆಂಬುದು ಆಶ್ಚರ್ಯದಸಂಗತಿಯಲ್ಲ, “ಲಕ್ಷದಮೇಲೆ ತೊಂಬತ್ತಾರುಸಾ

ವಿರ ಪ್ರಮಥರು" ಎಂಬುವ ಈ ಸಂಖ್ಯಾಪರಿಮಿತಿಯು ಎಷ್ಟೋ ಶತಮಾನ ಗಳಿಂದಲೂ ವೀರಶೈವರಲ್ಲಿ ಬಹು ಬಳಕೆಯಾಗಿದೆ. ಈ ಎಲ್ಲಾ ಕಾರಣಗ ಳಿಂದ ಬಸವಣ್ಣನವರ ಕಾಲದಲ್ಲಿಯೇ ಕಲ್ಯಾಣದಲ್ಲಿ ಸಹಸ್ರಾವಧಿಜನರು ವೀರಶೈವಮತವನ್ನನುಸರಿಸಿದ್ದರೆಂದು ಧಾರಾಳವಾಗಿ ಹೇಳಬಹುದು.

ಬಸವಣ್ಣನವರು ಆಗ ಆ ಕಲ್ಯಾಣಪಟ್ಟಣದ ಮಟ್ಟಿಗೇನೇ ಪ್ರಸಿದ್ಧ ರಾಗಿದ್ದಂತೆ ತೋರುವುದಿಲ್ಲ. ಈ ಮಹಾತ್ಮರ ವಾರ್ತೆಯು ಇಡೀ ಕರ್ನಾ ಟಕದೇಶವನ್ನೇ ವ್ಯಾಪಿಸಿದ್ದಿತು. ಆದುದರಿಂದಲೇ ಶ್ರೀ ಪ್ರಭುದೇವರು ಬನವಾಸಿಯ ಕಡೆಯಿಂದಲೂ, ಯೋಗಿನಿ ಶ್ರೀ ಅಕ್ಕಮಹಾದೇವಿ ಯವರು ಉಡತಡಿಯಿಂದಲೂ, ಸಿದ್ಧರಾಮಶಿವಯೋಗಿಗಳು ಸೊಲ್ಲಾ ಪುರದಿಂದಲೂ, ಮಡಿವಳ ಮಾಚಿದೇವರು ಹಿಪ್ಪರಿಗಿಯಿಂದಲೂ ಈ ಪ್ರಕಾರ ಎಲ್ಲಾ ಭಾಗಗಳಿಂದಲು ಮಹಾ ಮಹಾ ಜ್ಞಾನಿಗಳು ಬಸವಣ್ಣ ನವರ ಕಡೆಗೆ ಬಂದಿದ್ದರು. ಇಷ್ಟೆಲ್ಲಾ ನಡೆಯಲು ಈ ಮಹಾನುಭಾವರು ದೀರ್ಘಕಾಲ ಮತಪ್ರಸಾರವನ್ನೇನಾದರೂ ಮಾಡಿರುವರೇ? ಅದೂ ಇಲ್ಲ. ಕೇವಲ ಹತ್ತುವರ್ಷಗಳಲ್ಲಿಯೇ (ಕ್ರಿ. ಶ ೧೧೫೮-೧೧೬೮) ಇವರ ಈ ಮತಪ್ರಸಾರಕಾರ್ಯವು ಪರಿಸಮಾಪ್ತಿಯಾಗಿದೆ. ಈ ಹತ್ತುವರ್ಷ ಗಳಲ್ಲಿ ಅಹರ್ನಿಶಿ ಈ ಮತಪ್ರಸಾರಕಾರ್ಯವನ್ನೇ ಮಾಡುತ್ತಿದ್ದರೆಂದು ಹೇಳಲಿಕ್ಕಾಗುವುದಿಲ್ಲ. ಏಕೆಂದರೆ, ಮುಖ್ಯಮಂತ್ರಿಗಳಾಗಿದ್ದುದರಿಂದ ತಿಂಗಳೊಂದಕ್ಕೆ ಒಂದುಸಾವಿರ ಹೊನ್ನುವೇತನ ದೊರೆಯುತ್ತಿದ್ದಿ ತೆಂದು ಸಿಂಗಿರಾಜಪುರಾಣದ ೩೧ನೆಯ ಸಂಧಿಯಲ್ಲಿ ಹೇಳಿರುವುದನ್ನು ನೋಡಿದರೆ ರಾಜ್ಯಭಾರದ ಕೆಲಸವನ್ನೂ ಪ್ರತಿನಿತ್ಯ ಮಾಡಬೇಕಾಗಿದ್ದಿತು. ಈ ಎಲ್ಲಾ ವಿಷಯಗಳನ್ನು ಯೋಚಿಸಿದರೆ ಮತಪ್ರಸಾರಕ್ಕೋಸ್ಕರ ಶ್ರೀ ಬಸವಣ್ಣನವರು ಮಾಡಿದ ಪ್ರಯತ್ನಗಳು ಅತ್ಯಂತ ಮಹ ತ್ವದವುಗಳಾಗಿದ್ದವೆಂದು ವ್ಯಕ್ತವಾಗುವುದಿಲ್ಲವೇ?

ಸಿಂಗಿರಾಜಪುರಾಣಾದಿ ವೀರಶೈವ ಗ್ರಂಥಗಳನ್ನು ನೋಡಿದರೆ ಬಸವ ಣ್ಣನವರು ಸೂರ್ಯಚಂದ್ರರುಗಳನ್ನು ತಡೆದುದು, ಸತ್ತವರನ್ನು ಬದುಕಿಸಿ

ದುದು, ಜೋಳದರಾಶಿಯನ್ನು ಮುತ್ತಿನರಾಶಿಯಾಗಿಯು, ಮತ್ತು ವಿಷವನ್ನು ಅಮೃತವಾಗಿಯು ಮಾಡಿದುದು, ಕಳ್ಳರು, ಕಪಟಿಗಳು, ದುರಾಚಾರಿಗಳು ಆಗಿದ್ದವರನ್ನು ಶಿವಶರಣರನ್ನಾಗಿ ಮಾಡಿದುದು ಇವೇ ಮೊದಲಾದ ಪವಾಡಗಳಿಂದಲೇ ವೀರಶೈವಮತವನ್ನು ಪ್ರಸಾರಗೊಳಿಸಿದರೆಂದು ಯೋಚಿಸಬೇಕಾಗುತ್ತದೆ. ಧರಣಿಪಂಡಿತ, ಡಾ. ಭಾಂಡಾರ್‌ಕರ್ ಮೊದಲಾದವರು ಬರೆದಿರುವ ಗ್ರಂಥಗಳನ್ನು ನೋಡಿದರೆ ಬಡವರು, ನೀಚಕುಲದವರು, ಕುಂಟರು, ಕುರುಡರು, ಕಳ್ಳರು, ಹಣದಾಶೆಗಾಗಿ ಲಿಂಗವನ್ನು ಕಟ್ಟಿಕೊಂಡರೆಂತಲೂ, ಬಸವನು ಕೋಶಾಧೀಶನಾಗಿದ್ದುದರಿಂದ ಹಣವನ್ನು ಬೇಕಾದಹಾಗೆ ಸೂರೆಮಾಡಿ ಅನಾಚಾರಿಗಳಾದ (Profligate life) ಜಂಗಮರನ್ನು ಸಂರಕ್ಷಿಸಿದ್ದನೆಂತಲೂ ಭಾವಿಸಬೇಕಾಗುತ್ತದೆ. ಈಪ್ರಕಾರ ಆಕಾಶಕ್ಕೂ ಭೂಮಿಗೂ ವ್ಯತ್ಯಾಸವಿರುವಷ್ಟು ಭಿನ್ನಾಭಿಪ್ರಾಯಗಳುಂಟಾಗಲು ಕಾರಣವೇನು ? ಬಸವಣ್ಣನವರ ವಿಷಯದಲ್ಲಿ ಅನಿರ್ವಚನೀಯವಾದ ಪೂಜ್ಯಬುದ್ಧಿಯು ಒಬ್ಬರಲ್ಲಿದ್ದಿತೆಂತಲೂ, ಇನ್ನೊಬ್ಬರಲ್ಲಾದರೋ ಅವರ ವಿಷಯದಲ್ಲಿ ಅತ್ಯಧಿಕವಾದ ದ್ವೇಷಬುದ್ಧಿಯಿದ್ದಿತೆಂತಲೂ ತಿಳಿಯಬೇಕಾಗುತ್ತದೆ. ಇಲ್ಲದಿದ್ದರೆ ಇಷ್ಟು ಭಿನ್ನಾಭಿಪ್ರಾಯಗಳುಂಟಾಗಲವಕಾಶವಿಲ್ಲ. ಸಿಂಗಿರಾಜಪುರಾಣದ ಹತ್ತನೆಯ ಸಂಧಿಯಲ್ಲಿರುವ ಈ ಕೆಳಗಿನ ಎರಡು ಸಂಗತಿಗಳಮೇಲಿಂದ ಈ ಪ್ರಕಾರ ಭಿನ್ನಾಭಿಪ್ರಾಯಗಳು ಹೇಗುಂಟಾಗಿರಬಹುದೆಂಬುದನ್ನು ಯೋಚಿಸೋಣ.

ಒಬ್ಬ ಕಳ್ಳನು ಒಂದುದಿವಸ ಲೋಹದ ಗುಂಡನ್ನು ಲಿಂಗವನ್ನಾಗಿ ಕಟ್ಟಿಕೊಂಡು ಭಸ್ಮರುದ್ರಾಕ್ಷಿಗಳನ್ನೂ, ಕಾಷಾಯವಸ್ತ್ರವನ್ನೂ, ಧರಿಸಿಕೊಂಡು ಬಸವರಸನ ಮನೆಯಲ್ಲಿ ಪ್ರವೇಶಿಸಿ ಮಧ್ಯರಾತ್ರಿಯನಂತರ ತನ್ನ ಕಳ್ಳತನದ ಸರ್ವಸನ್ನಾಹಗಳನ್ನೂ ಸಿದ್ಧಪಡಿಸಿಕೊಂಡು ಬಸವಣ್ಣನವರು ಮಲಗಿದ್ದ ಕೋಣೆಯೊಳಗೆ ಹೋದನು. ಅಲ್ಲಿ ನೀಲಲೋಚನೆಯುಪರ ಎಲ್ಲಾ ಆಭರಣಗಳನ್ನೂ ತೆಗೆದುಕೊಂಡು ಅವರ ಹೊನ್ನೋಲೆಯನ್ನೂ ಮುತ್ತಿನ

ಸರವನ್ನೂ ತೆಗೆದುಕೊಳ್ಳಲು ಪ್ರಯತ್ನಿಸುತ್ತಿರುವಷ್ಟರಲ್ಲಿ ನೀಲಮ್ಮನವರು ಎಚ್ಚತ್ತು ಕೈಬೀಸಲು ಬಸವಣ್ಣನವರೂ ಎಚ್ಚರಗೊಂಡು " ಒಡನಿರ್ದಸತಿಯೆಂದು ನಚ್ಚಿರ್ದೆನಯ್ಯಾ । ಕೈವಿಡಿದಸಜ್ಜನೆಯೆಂದು ನಂಬಿರ್ದೆನಯ್ಯಾ । ಅಯ್ಯೋ ನಮ್ಮಯ್ಯನ ಕೈಯ್ಯುನೊಂದಿತು । ತೆಗೆದುಕೊಡಾ ಎಲೆಚಂಡಾಲಗಿತ್ತಿ । ಕಳ್ಳನಮನೆಗೊಬ್ಬ ಬಲುಗಳ್ಳಬಂದೊಡೆ । ಕೂಡಲಸಂಗಮದೇವನಲ್ಲದೆ ಆರೂ ಅಲ್ಲ " ಎಂದು ಬಸವಣ್ಣನವರು ಹೇಳಿ ಆ ಆಭರಣಗಳನ್ನು ಕಳ್ಳನಿಗೆ ಕೊಡಿಸಲು ಆತನು ಆಶ್ಚರ್ಯದಿಂದಲೂ, ಭಯಭ್ರಾಂತಿಯಿಂದಲೂ, ನಿಂತುಕೊಂಡುಬಿಟ್ಟನು. ಬೆಳಗಾದನಂತರ ಆತನನ್ನು ಪರಿಚಾರಕರು ಹಿಡಿದು ಕಟ್ಟಬೇಕೆನ್ನುವುದರೊಳಗಾಗಿ ಇವರು ಕಳ್ಳರಲ್ಲ; ಅಯ್ಯನವರು ಕಾಣಿರೊ ! ಎಂದು ಬಸವಣ್ಣನವರು ಹೇಳಿದನಂತರ ಆತನು ಶಿವಶರಣನಾಗಿಯೇ ಶೋಭಿಸಿದನು.

ಬಸವಣ್ಣನವರ ಮನೆಯ ಹಸುಗಳನ್ನು ಅಡವಿಯಲ್ಲಿ ಮೇಯಿಸುತ್ತಿರುವಾಗ ಒಂದುದಿವಸ ಕಳ್ಳರು ಆ ಹಸುಗಳನ್ನು ಕಾಯುವವಂಗೆ ಹೊಡೆದು ಅವುಗಳನ್ನೆಲ್ಲಾ ಅಟ್ಟಿಕೊಂಡು ಹೋಗಲು ಆ ಗೋಪಾಲಕರು ಬಂದು ಬಸವಣ್ಣನವರಲ್ಲಿ ಹೇಳಿಕೊಂಡರು. ಆಗ ಬಸವಣ್ಣನವರು " ಆಕೆಳುಕಳ್ಳರು ಕೊಂಡರೆನಬೇಡೆಲವೊ । ಸಂಗಕೊಂಡಿಲ್ಲವೆಂಬೋ ಮಾತಾಡದೀರೆಲವೊ । ಲಿಂಗಕೊಂಡಿಲ್ಲವೆಂಬೋಗಳಹದಿರೆಲವೊ । ಅಲ್ಲಿಯುಉಂಬನುಸಂಗ, ಇಲ್ಲಿಯುಉಂಬನುಸಂಗ । ಕೂಡಲಸಂಗಮದೇವನೇಕೋ ಭಾವಕಾಣಿರೊ ॥ " ಎಂಬುದಾಗಿ ಹೇಳಿ ಅವರು ಕಳ್ಳರಲ್ಲ. ಸಂಗಮನಾಥನೇ ಅಟ್ಟಿಕೊಂಡು ಹೋಗಿರುವನಾದುದರಿಂದ ಈ ಕರುಗಳನ್ನೂ ಹಿಡಿದುಕೊಂಡು ಆ ಹಸುಗಳು ಹೋದಮಾರ್ಗದಲ್ಲಿಯೇ ಹೋಗಿ ಅವುಗಳ ತಾಯಿಗಳ ಹತ್ತಿರ ಬಿಟ್ಟುಬನ್ನಿರೆಂದು ಕಳುಹಿಸಿದರು. ಹಸುಗಳನ್ನು ಅಟ್ಟಿಕೊಂಡುಹೋದ ಕಳ್ಳರು ಆ ಹಸುಗಳು ಮೇವನ್ನು ತಿನ್ನದೆ ನೀರನ್ನು ಕುಡಿಯದೆ ಸುಮ್ಮನಿದ್ದುದನ್ನು ನೋಡಿ ಆಶ್ಚರ್ಯಪಟ್ಟು ಅಯ್ಯೋ ! ನಮಗೆಂತಹ ಪಾಪಬರುತ್ತದೆಯೋ ? ಎಂದು ಅವುಗಳನ್ನು ತಿರುಗಿ ಅಟ್ಟಿಕೊಂಡು ಬರುವಾಗ ಈ ಕರುಗಳ ಶಬ್ದವನ್ನು ಆ ಹಸುಗಳು ಕೇಳಿ ಒಂದೇಕಡೆಗೆ ಬರಲು ಆ ಕಳ್ಳರೂ ಈ ಗೋಪಾಲ

ಕೆರೂ ಕೂಡಿ ನಡೆದ ಸಮಾಚಾರಗಳನ್ನು ಮಾತನಾಡಿದಮೇಲೆ ಆ ಕಳ್ಳರು ತಮ್ಮ ಕಳ್ಳತನವನ್ನು ನಿಂದಿಸಿಕೊಳ್ಳುತ್ತಾ ಬಸವಣ್ಣನವರ ಬಳಿಗೆ ಬಂದು ನಮಸ್ಕರಿಸಿದನಂತರ ಆ ನೂರೊಂದುಜನ ಕಳ್ಳರಿಗೂ ತಕ್ಕ ತಕ್ಕ ಸಂಸ್ಕಾರ ಗಳನ್ನು ಮಾಡಿಸಿ ಅವರು ಸುಚರಿತ್ರರಾಗುವಂತೆ ಮಾಡಿಸಿದರು.

ಬಸವಣ್ಣನವರ ಅದ್ಭುತವಾದ ದೈವಭಾವನೆಯಿಂದ ನಡೆದ ಇಂತಹ ಅನೇಕ ದೃಷ್ಟಾಂತಗಳಮೇಲಿಂದಲೇ ಈ ಮಹಾನುಭಾವರ ವಿಷಯದಲ್ಲಿ ಅನಿರ್ವಚನೀಯವಾದ ಭಕ್ತಿಯುಳ್ಳವರು ಸೂರ್ಯಚಂದ್ರರುಗಳ ತಡೆಯನ್ನು ವರ್ಣಿಸಿರಬೇಕು. ಈ ಬಸವಣ್ಣನವರ ವಿಷಯದಲ್ಲಿಯೇ ಈ ಪ್ರಕಾರ ವರ್ಣಿ ಸಲ್ಪಟ್ಟಿದೆಯೆಂದಲ್ಲ; ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಮತೋದ್ಧಾರ ಕರ ಚರಿತ್ರೆಗಳಲ್ಲಿ ಅಸಂಭವನೀಯವಿಷಯಗಳು ಆಯಾಯ ಮತೀಯರಿಂದ ವರ್ಣಿಸಲ್ಪಟ್ಟೇ ಇವೆ. ಅನೇಕ ಕಳ್ಳರು, ದುರಾಚಾರಿಗಳು, ಬಸವಣ್ಣನವರ ನಡತೆ, ಬೋಧ, ಸಹವಾಸಗಳಿಂದ ಸದಾಚಾರ ನಿರತರಾದರೆಂಬ ಅವರ ಅನೇಕ ಪವಾಡಗಳ ಮೇಲಿಂದಲೇ ಧರಣಿಪಂಡಿತ ಮೊದಲಾದವರು ಬಸವನು ಕಳ್ಳರೇ ಮೊದಲಾದ ದುರಾಚಾರಿಗಳಿಗೆಲ್ಲಾ ಲಿಂಗವನ್ನು ಕಟ್ಟಿ ಮತಪ್ರಸಾರ ಮಾಡಿದನೆಂದು ಈ ಪ್ರಕಾರ ಪರಮತದ್ವೇಷಾಧಿಕ್ಯದಿಂದ ಅತ್ಯುಕ್ತಿಯಾಗಿ ಬರೆದಿದ್ದಾರೆ. ಈಗಿನಂತೆ ಆ ಕಾಲದಲ್ಲೇನಾದರೂ ಹೊಟ್ಟೆಗೆ ಅನ್ನವಿಲ್ಲದೆ ಸಾಯುವಂತಹ ದಾರಿದ್ರ್ಯಸ್ಥಿತಿಯಿದ್ದಿತೇ ? ಈಗಕೂಡಾ ಹೊಟ್ಟೆಗಾಗಿ ಬೇರೆಮತವನ್ನನುಸರಿಸುವುದು ಅಪರೂಪವಾಗಿರುವಾಗ ಅಂತಹ ಸುಭಿಕ್ಷಕಾ ಲದಲ್ಲಿ- ಸ್ವಮತಾಚಾರಗಳ ವಿಷಯದಲ್ಲಿ ಅತ್ಯಂತ ನಿಷ್ಠೆಯಿದ್ದ ಆ ಹಿಂದಣ ಕಾಲದಲ್ಲಿ- ಕೇವಲ ಹೊಟ್ಟೆಗಾಗಿ ಲಕ್ಷಾಂತರಜನರು ಪರಮತವನ್ನನುಸರಿ ಸಿದರೆಂದು ತಿಳಿಯುವುದು ವಿಹಿತವೇ ? ಜನಸಾಮಾನ್ಯರೇ ಈ ಮತವನ್ನನು ಸರಿಸಿದ್ದರೆಂದು ಹೇಳಲಿಕ್ಕಾಗುವುದಿಲ್ಲ. ಹರಳೆಂಕ, ಮಂಚರಸ, ಮಧುವರಸ, ಜಗದೇವನಾಯಕ, ನಾಚಿರಾಜ, ಕೇಶವರಾಜ, ಸಕಲೇಶಮಾದರಸ, ಬಾಚ ರಸ, ಮೊದಲಾದ ಅನೇಕ ಪ್ರಸಿದ್ಧಪುರುಷರು ಕೂಡಾ ವೀರಶೈವಮತವ

ನ್ನನುಸರಿಸಿ ಮುಂದಾಳಾಗಿದ್ದರು. ಮತ್ತು ಕೀಳುಕುಲದವರು ಮಾತ್ರವೇ ವೀರಶೈವಮತವನ್ನನುಸರಿಸಿದರೆಂದು ತಿಳಿಯುವುದೂ ವಿಹಿತವಲ್ಲ. ಆ ಕಾಲ ದಲ್ಲಿದ್ದ ಶಿವಶರಣರಲ್ಲಿ ಒಬ್ಬರಾದ ಹಡಪದ ಅಪ್ಪಣ್ಣನವರು ತಮ್ಮ ವಚನ ಗಳಲ್ಲಿ ಈಪ್ರಕಾರ ಒಂದುಕಡೆ ಹೇಳಿದ್ದಾರೆ. "ಅಯ್ಯಾ ವೈಷ್ಣವರಾದವರು ತಮ್ಮ ವಿಷ್ಣುವಂಬಿಟ್ಟು ಕಳೆದು ಲಿಂಗಭಕ್ತರಾದರು ಕೆಲವರು. ಅಯ್ಯಾ, ಜೈನರಾದವರು ತಮ್ಮ ಜಿನಧರ್ಮವಂಬಿಟ್ಟು ಲಿಂಗಭಕ್ತರಾದರು ಅನೇಕರು. ಅಯ್ಯಾ, ದ್ವಿಜರಾಜ ದವರು ತಮ್ಮ ಕರ್ಮಂಗಳಬಿಟ್ಟು ಕಳೆದು ಶಿವಲಿಂಗಭಕ್ತರಾದರನೇಕರು."

ಬಸವಣ್ಣನವರಲ್ಲಿದ್ದ ಅಸಾಧಾರಣವಾದ ಸರ್ವಾತ್ಮಭಾವನೆಯಿಂದ ಅನೇಕ ದುರಾಚಾರಿಗಳು ಸದಾಚಾರಿಗಳಾದರೆಂಬ ಸಂಗತಿಗಳೇನೂ ನಂಬಲ ಸಾಧ್ಯವಾದವುಗಳಲ್ಲ. ಮಹಾತ್ಮರ ಚರಿತ್ರೆಗಳಲ್ಲಿ ಇಂತಹ ಅನೇಕ ದೃಷ್ಟಾಂ ತಗಳಿವೆ. ದಾರಿಕಾರರನ್ನು ಹೊಡೆದು ಅವರ ಬೆರಳುಗಳನ್ನು ಕತ್ತರಿಸಿ ಆ ಅಂಗುಲಿಗಳ ಸರವನ್ನು ಹಾಕಿಕೊಂಡು "ಅಂಗುಲಿಮಾಲಾ" ಎಂಬ ಹೆಸರಿ ನಿಂದ ಬಹು ಪ್ರಸಿದ್ಧನಾಗಿದ್ದ ಕಳ್ಳನು ಭಗವಾನ್ ಬುದ್ಧದೇವರನ್ನು ದಾರಿ ಯಲ್ಲಿ ಹೊಡೆಯಲಿಕ್ಕೆ ಹೋದಾಗ ಅವರಸಂಗಡ ಸಂಭಾಷಣೆಮಾಡಿದೊಡ ನೆಯೇ ತನ್ನ ಪಾಪವೃತ್ತಿಗಾಗಿ ಪಶ್ಚಾತ್ತಾಪಪಟ್ಟು ಆ ಕಳ್ಳತನವನ್ನು ಆಗಲೇ ಬಿಟ್ಟುಬಿಡಲು ಬುದ್ಧದೇವರು ಆತನನ್ನು ತಮ್ಮ ಭಿಕ್ಷುಸಂಗಪಲ್ಲಿ ಸೇರಿಸಿಕೊ ಳ್ಳಲಿಲ್ಲವೇ? ಹಾಗೆಯೇ ಬಸವಣ್ಣನವರ ಮನೆಗೆ ಬಂದಿದ್ದ ಕಳ್ಳನು ಅವರ ಶ್ರೇಷ್ಠಭಾವನೆಯನ್ನು ನೋಡಿ ಬೆರಗಾಗಿ ತನ್ನ ನೀಚವೃತ್ತಿಯನ್ನು ನಿಂದಿಸಿ ಕೊಂಡು ಶಿವಶರಣನಾದನು. ಕದ್ದುಕೊಂಡು ಹೋದ ಆಕಳುಗಳ ಹತ್ತಿ ರಲೇ ಕರುಗಳನ್ನೂ ಬಿಟ್ಟು ಬನ್ನಿರೆಂದು ಈ ಮಹಾನುಭಾವರು ಅಪ್ಪಣೆಮಾ ಡಿದುದನ್ನು ನೋಡಿದರೆ, "ನಿನ್ನಸಂಗಡ ವ್ಯಾಜ್ಯಮಾಡಿ ನಿನ್ನ ಒಳಂಗಿ ಯನ್ನು ತಕ್ಕೊಳ್ಳಬೇಕೆಂದಿರುವವನಿಗೆ ಮೇಲಂಗಿಯನ್ನೂ ಬಿಡು"* ಎಂದು ಸಾಧುವರ್ಯ ಯೇಸುಕ್ರಿಸ್ತನು ಹೇಳಿರುವುದು ಜ್ಞಾಪಕವಾಗುವುದಿ ಲ್ಲವೇ? ಸಂಕುಚಿತದೃಷ್ಟಿಯವರಿಗೆ ಈ ನಡೆನುಡಿಗಳು ಅಸಂಭವನೀಯ

---

* ಮತ್ತಾಯ ೫. ೪೦-೪೧.

ವಾಗಿಯೂ, ಅನುಚಿತವಾಗಿಯೂ ತೋರಿದರು ಮಹಾತ್ಮರಿಗೆ ಮಾತ್ರ ಸಂಭವನೀಯವಾಗಿಯೂ, ಉಚಿತವಾಗಿಯೂ ಇರುತ್ತವೆ.

ಭಗವಾನ್ ಗೌತಮಬುದ್ಧನಿಗೆ ಕೌಂಡಿಣ್ಯಾದಿ ಬ್ರಾಹ್ಮಣರು, ಬಿಂಬಿಸಾರ ಮೊದಲಾದ ಕ್ಷತ್ರಿಯರಾಜಮನೆತನದವರು, ಅನಾಥಪಿಂಡಿಕ ಮೊದಲಾದ ಧನಿಕರು, ಖೇಮಾ ಮೊದಲಾದ ಕ್ಷತ್ರಿಯ ರಾಜಕನ್ನಿಕೆಯರು ಹೇಗೆ ಶಿಷ್ಯತ್ವವನ್ನು ವಹಿಸಿದ್ದರೋ ಹಾಗೆಯೇ ಸುನೀತನೆಂಬ ಮಾದಿಗನು, ಸ್ವಾತಿಯೆಂಬ ಅಂಬಿಗನು, ನಂದನೆಂಬಗ ವಳಿಗನು, ಉಪಾಲಿಯೆಂಬ ಕ್ಷೌರಿಕನು, ಅಂಬಾಪಾಲಿಯೆಂಬ ವೇಶ್ಯಳು, ವಿಮಲಾ ಎಂಬ ವೇಶ್ಯಕುವರಿಯು, ಚಂಪಾ ಎಂಬ ಬೇಡರಕುವರಿಯು, ಪೂರ್ಣಾ ಎಂಬ ದಾಸೀಪುತ್ರಿಯು ಆ ಮಹಾತ್ಮನ ಶಿಷ್ಯವರ್ಗದಲ್ಲಿಯೇ ಸೇರಿದ್ದರು. ತನ್ನ ಮತಕ್ಕೆ ಸೇರಿದನಂತರ ಅವರ ಹಿಂದಣ ಕುಲವೃತ್ತಿಗಳನ್ನು ಯೋಚಿಸಿ ಭಿನ್ನಭೇದಗಳನ್ನೇನಾದರೂ ಆ ಮಹಾನುಭಾವನು ಮಾಡುತ್ತಿದ್ದನೇ ? ತನ್ನ ಭಿಕ್ಷುಸಮೂಹದೊಡನೆ ಅಂಬಾಪಾಲಿ ಎಂಬ ವೇಶ್ಯಳ ಮನೆಗೆ ಬುದ್ಧಭಗವಾನನು ಭೋಜನಕ್ಕೆ ಹೋಗಿರಲಿಲ್ಲವೇ ? ಈ ದೃಷ್ಟಾಂತಗಳಮೇಲಿಂದ ಬುದ್ಧದೇವನು ಕಳ್ಳರನ್ನೆಲ್ಲಾ ಭಿಕ್ಷುಗಳನ್ನಾಗಿಮಾಡಿ ಹೀನಕುಲದವರನ್ನೂ, ಪುಂಡರನ್ನೂ, ವ್ಯಭಿಚಾರಿಗಳನ್ನೂ, ಕೂಡಿಕೊಂಡು ಬಿಂಬಿಸಾರರಾಜನ ಆಶ್ರಯದಿಂದ ಇವರನ್ನೆಲ್ಲಾ ರಕ್ಷಿಸಿ ಒಂದು ಮತವನ್ನುಂಟುಮಾಡಿದನೆಂದು ಯಾರಾದರೂ ಹೇಳಿದರೆ ಅದು ಹೇಗೆ ಅಯುಕ್ತವಾಗಿಯೂ ನಿಂದ್ಯವಾಗಿಯೂ ಪರಿಣಮಿಸುತ್ತದೆಯೋ ಹಾಗೆಯೇ ಬಸವಣ್ಣನವರು ಕಳ್ಳರಿಗೂ, ಪುಂಡರಿಗೂ, ಹೀನಕುಲದವರಿಗೂ ಲಿಂಗವನ್ನು ಕಟ್ಟಿ ಬಿಜ್ಜಳರಾಜನ ಹಣವನ್ನೆಲ್ಲಾ ಹಾಳುಮಾಡಿ ವೀರಶೈವ ಮತವನ್ನುಂಟುಮಾಡಿದರೆಂದು ಹೇಳುವುದು ಕೂಡಾ ಅನುಚಿತವಾಗಿಯೂ ಹೇಯವಾಗಿಯೂ ಪರಿಣಮಿಸದಿರಲಾರದು.

ವೀರಶೈವಮತಕ್ಕೆ ಮಧುವಯ್ಯ ಮೊದಲಾದ ಬ್ರಾಹ್ಮಣರನ್ನೂ, ಸಕಲೇಶ ಮಾದರಸ ಮೊದಲಾದ ರಾಜಮನೆತನದವರನ್ನೂ ಸಿದ್ಧಿಗಶೆಟ್ಟಿ

ಮೊದಲಾದ ಧನಿಕರನ್ನೂ, ಗಂಗಾಂಬಿಕಾ ಮೊದಲಾದ ಉತ್ತಮವರ್ಣದ ಸ್ತ್ರೀಯರನ್ನೂ ಬಸವಣ್ಣನವರು ಹೇಗೆ ಸೇರಿಸಿಕೊಂಡಿದ್ದರೋ ಹಾಗೆಯೇ ಬಿಂಡನಾಗಯ್ಯನವರನ್ನೂ, ಹಡಪದ ಅಪ್ಪಣ್ಣನವರನ್ನೂ, ಅಂಬಿಗರ ಚೌಡಯ್ಯನವರನ್ನೂ, ಮಾದಾರ ಚೆನ್ನಯ್ಯನವರನ್ನೂ, ಮೊಚ್ಚಿಗರ ಹರಳಯ್ಯನವರನ್ನೂ, ಕಮಲಾಯಿಯೆಂಬ ವೇಶ್ಯೆಳನ್ನೂ, ಡೋಹರ ಕಕ್ಕಯ್ಯನವರನ್ನೂ, ಮಡಿವಳ ಮಾಚಯ್ಯನವರನ್ನೂ ವೀರಶೈವಮತದಲ್ಲಿ ಕೂಡಿಸಿಕೊಂಡಿದ್ದರು. ಏಕೆಂದರೆ, ಅವರಿಗೆ ಕುಲಮುಖ್ಯವಾಗಿರಲಿಲ್ಲ; ಗುಣಮುಖ್ಯವಾಗಿದ್ದಿತು. ಜನ್ಮಮುಖ್ಯವಾಗಿರಲಿಲ್ಲ. ಆಚಾರಮುಖ್ಯವಾಗಿದ್ದಿತು. ಇದೇ ವೀರಶೈವಮತದ ಸನಾತನ ಪದ್ಧತಿಯು. ಈ ಕುಲವಿಚಾರವಾಗಿ ಮಹಾನುಭಾವರಾದ ಬಸವಣ್ಣನವರು ಹೇಳಿರುವುದೇನೆಂದರೆ:—

> ಕೊಲ್ಲುವವನೆ ಮಾದಿಗನು. ಹೊಲಸುತಿಂಬುವವನೇ ಹೊಲೆಯ. ಕುಲವೇನೋ ಅವಂದಿರ ಕುಲವೇನೋ? ಸಕಲಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೆಲ್ಲಾ ಕುಲಜರು.
>
> ಶೆಟ್ಟಿಯೆಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚೆನ್ನಯ್ಯನ? ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ.

ತಾವು ಶ್ರೇಷ್ಠವಾದ ಬ್ರಾಹ್ಮಣಕುಲದಲ್ಲಿ ಹುಟ್ಟಿದ್ದೇವೆಂಬ ಕುಲಾಭಿಮಾನವಾಗಲಿ, ಮುಖ್ಯಮಂತ್ರಿಗಳಾಗಿದ್ದೇವೆಂಬ ಉದ್ಯೋಗಾಭಿಮಾನವಾಗಲಿ ಈ ಮಹಾತ್ಮರಲ್ಲಿ ತಿಲಾಂಶವಾದರೂ ಇದ್ದಿತೇ? ಸದ್ಗುಣಸದಾಚಾರಗಳುಳ್ಳವರನ್ನು ಈ ಮಹನೀಯರು ಹೇಗೆ ಭಾವಿಸುತ್ತಿದ್ದರೆಂಬುದು ಈ ಕೆಳಗಿನ ವಚನದಿಂದ ವ್ಯಕ್ತವಾಗುತ್ತದೆ.

> ಅಪ್ಪನು ನಮ್ಮ ಮಾದಾರಚೆನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯನೆಮ್ಮಯ್ಯ ಕಾಣಿರಯ್ಯ. ಅಣ್ಣನು ನಮ್ಮ ಕಿನ್ನರಿ ಬ್ರಹ್ಮಯ್ಯ. ಎನ್ನನೇತಕ್ಕರಿಯರಿ ಕೂಡಲ ಸಂಗಮ ದೇವಯ್ಯ?

ಈ ನಡೆನುಡಿಗಳ ಮೇಲಿಂದ ಆ ಮಹಾತ್ಮರಾದ ಬಸವಣ್ಣನವರು ಜನಾಂಗದ ಅಧೋಗತಿಗೆ ಕಾರಣವಾಗಿದ್ದ ಕುಲಜನ್ಮಗಳ ಪ್ರಾಶಸ್ತ್ಯೆಯ ತಪ್ಪು ತಿಳುವಳಿಕೆಗಳನ್ನು ತೆಗೆದುಹಾಕಿ ಸದ್ಗುಣ ಸದಾಚಾರಗಳ ಘನತೆಯನ್ನು ಜನಾಂಗದಲ್ಲಿ ನೆಲೆಗೊಳಿಸುವುದಕ್ಕಾಗಿಯೇ ಈ ಪವಿತ್ರಕಾರ್ಯವನ್ನು ಪ್ರಾರಂಭಿಸಿದ್ದರೆಂದು ಸಿದ್ಧವಾಗುವುದಿಲ್ಲವೇ? ಈಪ್ರಕಾರ ನಾನಾ ಕುಲದವರನ್ನೆಲ್ಲಾ ಮತಕ್ಕೆ ಸೇರಿಸಿಕೊಂಡು ಅವರ ಸದ್ಗುಣ ಸದಾಚಾರಗಳಿಗೆ ವಿಧೇಯರಾಗಿ ಆಚರಿಸುತ್ತಿದ್ದುದನ್ನು ನೋಡಿ ಕೊಂಡೆಯ ಮಂಚಣ್ಣನವರು ರಾಜಸಭೆಯಲ್ಲಿ ಬಸವಣ್ಣನವರನ್ನು ವಿಚಾರಿಸಲು ನಡೆದ ಸಂಭಾಷಣೆಯು ಸಿಂಗಿರಾಜಪುರಾಣದ ಹತ್ತೊಂಬತ್ತನೆಯ ಸಂಧಿಯಲ್ಲಿ ಈಪ್ರಕಾರ ವಿವರಿಸಲ್ಪಟ್ಟಿದೆ.

ಕೊಂಡೆಯ ಮಂಚಣ್ಣನವರು—ಬಸವದಂಡಾಧೀಶರೇ? ಗಾವಿಲರು, ಒಡಗಿಯವರು, ಕಮ್ಮಾರರು, ಅಗಸರು, ಬೋವರು, ಅಕ್ಕಸಾಲೆಯರು, ಕುರುಬರು, ಕುಂಬಾರರು. ಇವರಿಗೆಲ್ಲಾ ನೀವು ನಮಸ್ಕಾರಮಾಡಬಹುದೇ?

ಬಸವಣ್ಣನವರು—ಅಯ್ಯಾ ಮಂಚಣ್ಣನವರೇ? ನಾನು ನಮ್ಮ ಶಿವಶರಣರಿಗೆ ಮಾತ್ರ ಶರಣೆಂದು ನಮಸ್ಕಾರ ಮಾಡುವೆನಲ್ಲದೆ ಉಳಿದ ಗಾವಿಲರಿಗೆ ನಮಸ್ಕಾರಮಾಡುವುದಿಲ್ಲ. ಆ ಗಾವಿಲರನ್ನು ನಾನು ಕಾಣೆನು. ನಿಮ್ಮ ಪ್ರಾಕೃತ ಮತದ ಋಷಿಗಳೆಲ್ಲರೂ ಸತ್ಕುಲೋತ್ಪನ್ನರೇ? ವ್ಯಾಸನು ಬೆಸ್ತನ ಮಗನು. ಸಾಂಖ್ಯನು ಶ್ವಪಚನ ಮಗನು. ಕೌಂಡಿಲ್ಯನು ಕ್ಷೌರಿಕನ ಮಗನು. ದೂರ್ವಾಸನು ಮೋಚಿಯವನ ಮಗನು. ಮಾತಂಗಿಯ ಮುನಿಯು ಮಾದಗಿತ್ತಿಯ ಮಗನು. ವಸಿಷ್ಠನು ಸೂಳೆಯ ಮಗನು. ಕಾಶ್ಯಪನು ಕಮ್ಮಾರನ ಮಗನು. ಅಗಸ್ತ್ಯನು ಕಬ್ಬಿಗನ ಮಗನು. ವಾಲ್ಮೀಕಿಯು ಬೇಡನ ಮಗನು. ಇನ್ನುಳಿದ ಮುನಿಗಳ ಕುಲಜಾತಿಗಳನ್ನೆತ್ತಿ ಆಡುವುದೇತಕ್ಕೆ?

ಭಗವಾನ್ ಬುದ್ಧದೇವನು ಜನ್ಮವಿಶಿಷ್ಟವಾದ ವರ್ಣಕಲ್ಪನೆಯನ್ನು ಹೇಗೆ ತೆಗೆದುಹಾಕಿ ಗುಣವಿಶಿಷ್ಟವಾದ ವೈದಿಕ ಸನಾತನ ತತ್ವವನ್ನೇ ಸ್ಥಾಪಿ

ಸಿದನೋ ಹಾಗೆಯೇ ಆ ಬುದ್ಧದೇವನ ತರುವಾಯ ಸಾಧಾರಣ ೧೬೦೦ ವರ್ಷಗಳನಂತರ ಮಹಾನುಭಾವರಾದ ಬಸವಣ್ಣನವರೇ ಪುನಃ ಆ ನಿಜವಾದ ವೈದಿಕ ಪದ್ಧತಿಯನ್ನು ವೀರಶೈವಮತದ ಮೂಲಕ ಜೀರ್ಣೋದ್ಧಾರಮಾಡಿದರು. ಹಿಂಸಾಯುಕ್ತವಾದ ಯಜ್ಞಯಾಗಗಳನ್ನು ಬುದ್ಧದೇವನು ನಿಷೇಧಿಸಿ ಆ ಭಯಂಕರವಾದ ಪಶುಹತ್ಯವನ್ನು ಹೇಗೆ ನಿಲ್ಲಿಸಿದನೋ ಹಾಗೆಯೇ ಬಸವಣ್ಣನವರು ಕೂಡಾ ಪಶುಯಜ್ಞವನ್ನು ನಿಷೇಧಿಸಿ ವೀರಶೈವಮತದ ಶ್ರೇಷ್ಠತೆಯನ್ನು ವ್ಯಕ್ತಗೊಳಿಸಿದರು. ಈ ವಿಷಯವಾಗಿ ಹೇಳಿರುವುದೇನೆಂದರೆ:—

> ಇಟ್ಟಿಯಹಣ್ಣನರಿತಿಂದು ಸೃಷ್ಟಿತಿಡುಗಿತೆಂಬಂತೆ ಮುಟ್ಟಿಯನಿಟ್ಟದ್ವಿಜರ ಮಾತೇಕೋ ? ಹಗಲುಕಾಣದಗೂಗೆ ಇರುಳಾಯಿತೆಂದರೆ ಜಗಕ್ಕೆ ಇರುಳಪ್ಪುದೇಮುರುಳೇ ? ಹೋಮದನೇಮದಲ್ಲಿ ಹೋತವಕೊಂದುತಿಂಬ ಅನಾಮಿಕರೊಡನಾಡಿ ಗೆಲುವುದೇನು ಕೂಡಲಸಂಗಮದೇವಾ ?

> ಮಾತಿನಮಾತಿಗೆ ನಿನ್ನ ಕೊಂದಿಹರೆಂದು ಎಲೇಹೋತ ಅಳುಕಂಡಿಯಾ. ವೇದವನೋದಿದವರಮುಂದೆ ಅಳುಕಂಡಿಯಾ ಹೋತೆ. ಶಾಸ್ತ್ರವಕೇಳಿದವರಮುಂದೆ ಅಳುಕಂಡಿಯಾ ಹೋತೆ. ನೀನತ್ತುದಕ್ಕೆ ತಕ್ಕದ್ದುಮಾಡುವ ಕೂಡಲಸಂಗಮದೇವನವರ.

> ಹೊಲೆಯೊಳಗೆಹುಟ್ಟಿ ಕುಲವನರಸುವೆ. ಎಲವೋ ಮಾತಂಗಿಯಮಗ ನೀನು ಸತ್ತುದನೆಳೆವನೆತ್ತಣಹೊಲೆಯ ? ಹೋತುತಂದುನೀವು ಕೊಲ್ಲುವಿರಿ. ಶಾಸ್ತ್ರವೆಂಬುದು ಹೋತಿಂಗೆಮಾರಿ. ವೇದವೆಂಬುದುನಿಮಗೆ ತಿಳಿಯದು. ನಮ್ಮ ಕೂಡಲಸಂಗಮಶರಣರು ಕರ್ಮರಹಿತರು. ಶರಣಸನ್ನಿಹಿತರು. ಅನುಪಮಚರಿತ್ರರು. ಅವರಿಗೆ ತೋರಲು ಪ್ರತಿಯಿಲ್ಲ.

ಬುದ್ಧದೇವನು ತನ್ನ ಮತಕ್ಕೆ ಸೇರಿಸಿಕೊಳ್ಳಬೇಕಾದರೆ ಮೊದಲು ಧರ್ಮಕ್ಕೆ, ಸಂಘಕ್ಕೆ, ಮತ್ತು ಬುದ್ಧನಿಗೆ (ಜ್ಞಾನಿಗೆ) ಶರಣಾಗತನಾಗಿ ಅನಂತರ ಹಿಂಸೆಯನ್ನು, ಕಳ್ಳತನವನ್ನು, ವ್ಯಭಿಚಾರವನ್ನು, ಅಸತ್ಯವನ್ನು ಮತ್ತು ಮಾದಕ ಪದಾರ್ಥಗಳ ಸೇವನೆಯನ್ನು ತ್ಯಜಿಸಬೇಕಾದ ಈ ಪಂಚಾ

ಚಾರಗಳನ್ನಾಚರಿಸಬೇಕೆಂದು ಹೇಗೆ ನಿಯಮಮಾಡಿದ್ದನೋ ಹಾಗೆಯೇ ಬಸವಣ್ಣನವರು ಕೂಡಾ ವೀರಶೈವಮತದ ಪ್ರಕಾರ ಮೊದಲು ಗುರುಲಿಂಗಜಂಗಮಗಳಿಗೆ ಅಧೀನನಾಗಿ ಅಭಕ್ಷ್ಯಣಾಭಕ್ಷಣ, ಅಪೇಯಪಾನಗಳನ್ನು ತ್ಯಜಿಸಿ ಗುರುವಿಗೆ ತನುವನ್ನು ಲಿಂಗಕ್ಕೆ ಮನವನ್ನು ಜಂಗಮಕ್ಕೆ ಧನವನ್ನು ಸಮರ್ಪಿಸಬೇಕೆಂದು ಕಟ್ಟಪ್ಪಣೆಮಾಡಿದ್ದರೆಂದು ತೋರುತ್ತದೆ. ಬುದ್ಧದೇವನಂತೆಯೇ ಬಸವಣ್ಣನವರು ಕೂಡಾ ನೈತಿಕವಿಷಯಗಳಿಗೆ ಬಹು ಪ್ರಾಮುಖ್ಯತೆಯನ್ನು ಕೊಟ್ಟಿದ್ದರೆಂಬುದು ಈ ಕೆಳಗಿನ ವಚನದ ಮೇಲಿಂದ ಸ್ಪಷ್ಟವಾಗುತ್ತದೆ.

> ಕಳಹಬೇಡ. ಕೊಲಬೇಡ. ಹುಸಿಯನುಡಿಯಲುಬೇಡ. ಮುನಿಯಬೇಡ. ಅನ್ಯರಿಗೆ ಅಸಹ್ಯವನುಡಿಯಲುಬೇಡ. ತನ್ನಬಣ್ಣಿಸಬೇಡ. ಇದಿರಹಳಿಯಲುಬೇಡ. ಇದೇ ಅಂತರಂಗಶುದ್ಧಿ. ಇದೇ ಬಹಿರಂಗಶುದ್ಧಿ. ಇದೇ ನಮ್ಮಕೂಡಲಸಂಗಮದೇವರ ನೊಲಿಸುವಪರಿ.

ಜನಸಾಮಾನ್ಯರಿಗು ಕೂಡಾ ತನ್ನ ಮತತತ್ವಗಳು ತಿಳಿಯಬೇಕೆಂದು ಆ ಬುದ್ಧದೇವನು ಸಂಸ್ಕೃತಭಾಷೆಯನ್ನು ಬಿಟ್ಟು ಪಾಲಿಭಾಷೆಯಲ್ಲಿಯೇ ಹೇಗೆ ಮತೋಪದೇಶಮಾಡಲುಪಕ್ರಮಿಸಿದನೋ ಹಾಗೆಯೇ ಬಸವಣ್ಣನವರುಕೂಡಾ ಸಾಮಾನ್ಯಜನರಿಗುಕೂಡಾ ವೀರಶೈವಮತತತ್ವಗಳು ತಿಳಿಯಲೆಂದು ಮತೋಪದೇಶಕ್ಕೂ, ಚರ್ಚೆಗಳಿಗೂ, ಜಿಜ್ಞಾಸಕ್ಕೂ ಕನ್ನಡಭಾಷೆಯನ್ನೇ ಪ್ರಾಮುಖ್ಯವಾಗಿಟ್ಟುಕೊಂಡರು. ಎಲ್ಲಾ ಶಿವಶರಣರೂ ತಮ್ಮತಮ್ಮ ಅನುಭವಮಂಟಪಗಳಲ್ಲಿ ಜನಗಳಿಗೆ ಕನ್ನಡದಲ್ಲಿಯೇ ಮತೋಪದೇಶ ಮಾಡುತ್ತಿದ್ದರು. ವೇದಾಗಮೋಪನಿಷದಾದಿ ಉದ್ಗ್ರಂಥಗಳಲ್ಲಿದ್ದ ಮಹಾಮಹಾ ತತ್ವಗಳನ್ನು ವ್ಯಾಕರಣ ಛಂದಸ್ಸುಗಳ ಕಟ್ಟುಗಳಿಗೆ ಸಹ ಒಳಗಾಗದೆ ವಾಡಿಕೆಯ ಭಾಷೆಯಲ್ಲಿ ಜನಗಳಿಗೆ ಸುಲಭದರಲ್ಲಿ ತಿಳಿಯುವಂತಹ ವಚನಪದ್ಧತಿಯನ್ನು ಈ ಮಹಾನುಭಾವರೇ ಕನ್ನಡದಲ್ಲಿ ಮೊದಲು ಪ್ರಾರಂಭಿಸಿದರು. ಹೀಗೆಮಾಡದೆ ಮತೋಪದೇಶಕ್ಕೂ, ಚರ್ಚೆಗಳಿಗೂ ಹಿಂದಿನವ

ರಂತೆ ಸಂಸ್ಕೃತಭಾಷೆಯನ್ನೇ ಪ್ರಾಮುಖ್ಯವಾಗಿಟ್ಟುಕೊಂಡು ನಾನಾಭಾಷ್ಯಗಳನ್ನು ಬರೆದು ಅನಂತರ ಅವುಗಳ ವಿವರವನ್ನೂ, ರಹಸ್ಯವನ್ನೂ ತಿಳಿಸಲು ಶಾಸ್ತ್ರಜ್ಞರು ಮತ್ತು ವೈಯಾಕರಣಿಗಳು ವಕೀಲರಾಗುವಂತೆ ಮಾಡಿದ್ದರೆ ಜನಸಾಮಾನ್ಯರಲ್ಲಿ ಈಪ್ರಕಾರ ವಿಚಾರಕ್ರಾಂತಿಯಾಗಿ ಅವರು ಸದಾಚಾರ ಸಂಪನ್ನರಾಗಲು ಅವಕಾಶವಾಗುತ್ತಿರಲಿಲ್ಲ. ಈಗ ಪ್ರಪಂಚವೇ ದೇಶಭಾಷೆಗೆ ಯಾವ ಮಹತ್ತರವಾದ ಉದ್ದೇಶದಿಂದ ಪ್ರಾಮುಖ್ಯತೆಯನ್ನು ಕೊಡುತ್ತಲಿದೆಯೋ ಆ ಶ್ರೇಷ್ಠತರವಾದ ಉದ್ದೇಶದಿಂದಲೇ ಆಗ ಬಸವಣ್ಣನವರು ಕನ್ನಡಭಾಷೆಗೆ ಅಷ್ಟು ಮಹತ್ವವನ್ನು ಕೊಟ್ಟು ಈ ಭಾಷೆಯ ಮೂಲಕವಾಗಿಯೇ ಮತಪ್ರಸಾರವನ್ನು ಮಾಡಿದರು.

ಬುದ್ಧದೇವನು ತನ್ನ ಭಿಕ್ಷುಗಳು ಅನ್ಯರಿಂದ ಎಂತಹ ದೂಷಣೆ, ಹಿಂಸೆ, ವಿಪತ್ತುಗಳು ಸಂಭವಿಸಿದರೂ ಅವರಿಗೆ ಪ್ರತಿಯಾಗಿ ದೂಷಣೆ ಹಿಂಸಾದಿಗಳನ್ನುಂಟುಮಾಡಕೂಡದೆಂದು ಹೇಗೆ ಬೋಧಿಸಿದ್ದಾನೆಯೋ ಹಾಗೆಯೇ ಈ ಮಹಾನುಭಾವರುಕೂಡಾ ಶರಣರು ಅಹಿಂಸಾ ವ್ರತದಿಂದಲೇ ಆಚರಿಸಬೇಕೆಂದು ಹೇಳಿದ್ದಾರೆಂಬುದು ಈ ಕೆಳಗಿನ ವಚನಗಳಮೇಲಿಂದ ಸ್ಪಷ್ಟವಾಗುತ್ತದೆ.

ಒಯಿದವರೆನ್ನ ಹೊರೆದವರೆಂಬೆನು. ಬೈದವರೆನ್ನ ಬಂಧುಗಳೆಂಬೆನು. ನಿಂದಿಸಿದವರೆನ್ನ ತಾಯಿತಂದೆಗಳೆಂಬೆ. ಆಳಿಗೊಂಡವರು ಆಳ್ದರೆಂಬೆ. ಜರಿದವರೆನ್ನ ಜನ್ಮಬಂಧುಗಳೆಂಬೆ. ಕೊಂಡಾಡಿದವರೆನ್ನ ಹೊನ್ನಶೂಲದಲ್ಲಿಕ್ಕಿದವರು ಕೂಡಲಸಂಗಮದೇವಾ.

ಇರಿಸಿಕೊಂಡು ಭಕ್ತರಾದರೆಮ್ಮವರು. ತರಿಸಿಕೊಂಡು ಭಕ್ತರಾದರೆಮ್ಮವರು. ಕೊರಿಸಿಕೊಂಡು ಭಕ್ತರಾದರೆಮ್ಮವರು. ಜರಿಸಿಕೊಂಡು ಭಕ್ತರಾದರೆಮ್ಮವರು. ಕೂಡಲಸಂಗನ ಶರಣರಿಗೆ ಮುನಿಸಿತಾಳಿ. ಎನ್ನ ಭಕ್ತಿಯರೆಯಾಯಿತ್ತು.

ಅರ್ಥಕ್ಕೆ ತಪ್ಪಿದರೇನು? ಪ್ರಾಣಕ್ಕೆ ತಪ್ಪಿದರೇನು? ಅಭಿಮಾನಕ್ಕೆ ತಪ್ಪಿದರೇನು? ಶರಣರು ಶರಣರಲ್ಲಿ ಗುಣವನರಸುವರೇ? ಕೂಡಲಸಂಗನ ಶರಣರುನೊಂದರೆ ಸೈರಿಸುವುದು.

ಬುದ್ಧಭಗವಾನನು ಭಿಕ್ಷುಗಳಮೂಲಕ ತನ್ನ ಮತವನ್ನು ಹೇಗೆ ದೇಶಗಳಲ್ಲೆಲ್ಲಾ ಪ್ರಸಾರಗೊಳಿಸಿದನೋ ಹಾಗೆಯೇ ಬಸವಣ್ಣನವರುಕೂಡಾ ಜಂಗಮಮೂರ್ತಿಗಳಿಂದಲೇ ವೀರಶೈವ ಮತವನ್ನು ಪ್ರಸಾರಗೊಳಿಸಿದ್ದಾರೆಂದು ಹೇಳಬಹುದು. ಆದರೆ ಈ ಕಾರ್ಯವು ಆ ಮಹಾನುಭಾವರಿರುವಾಗಲೇ ಹೆಚ್ಚಾಗಿ ಜರುಗಲಿಲ್ಲ. ಕಲ್ಯಾಣದಲ್ಲಿ ರಾಜ್ಯಕ್ರಾಂತಿಯಾದನಂತರ ಅಲ್ಲಿಂದ ನಾನಾಭಾಗಗಳಿಗೆ ಹೊರಟುಹೋದ ಅಸಂಖ್ಯಜಂಗಮರೇ ಮುಂದೆ ಈ ಮತವನ್ನು ಪ್ರಸಾರಗೊಳಿಸಿದರು. ಜಂಗಮರು ತಾವು ಕಲ್ಯಾಣದಿಂದ ಬಂದೆವೆಂದು ಹೇಳಿಕೊಳ್ಳುವ ರೂಢಿಯು ಈಗಲುಕೂಡಾ ವಿಶೇಷವಾಗಿಯೇ ಇದೆಯಷ್ಟೆ.

ಈವರೆಗೆ ವಿವರಿಸಿರುವ ಅನೇಕವಿಷಯಗಳ ಮೇಲಿಂದ ಬುದ್ಧದೇವನು ಯಾವ ಉದ್ದೇಶಕ್ಕೋಸ್ಕರ ಬೌದ್ಧಮತವನ್ನುಂಟುಮಾಡಿದನೋ ಆ ಶ್ರೇಷ್ಠತರವಾದ ಉದ್ದೇಶಕ್ಕೋಸ್ಕರವಾಗಿಯೇ ಬಸವಣ್ಣನವರು ವೀರಶೈವಮತವನ್ನು ಪ್ರಸಾರಮಾಡಿದರೆಂತಲು ಮತ್ತು ಈ ಉಭಯರ ಮತಪ್ರಸಾರದ ಪದ್ಧತಿಗಳುಕೂಡಾ ಎಷ್ಟೋ ಸಮಾನವಾಗಿದ್ದವೆಂತಲು ನಿಷ್ಪಕ್ಷಪಾತಿಗಳಾದ ವಾಚಕರಿಗೆ ವ್ಯಕ್ತವಾಗದಿರಲಾರದು. ಆದರೆ ಬುದ್ಧದೇವನ ಮತಬೇರೆ. ಈ ಮಹಾನುಭಾವರ ಮತಬೇರೆ. ಆತನ ಮಾರ್ಗವೇ ಬೇರೆ. ಇವರ ಮಾರ್ಗವೇ ಬೇರೆ. ಏಕೆಂದರೆ, ಆತನು ಜ್ಞಾನಮೂರ್ತಿಯಾಗಿದ್ದನು. ಇವರು ಭಕ್ತಿಯ ಪುತ್ಥಳಿಯಾಗಿದ್ದರು. ಹೀಗಿದ್ದರೂ ಸಾಧುವರ್ಯ ಯೇಸುಕ್ರಿಸ್ತನು ಹೇಳಿರುವಂತೆ, "ನಾನು ನೀತಿವಂತರನ್ನು ಕರೆಯುವುದಕ್ಕೆ ಬಂದವನಲ್ಲ; ಪಾಪಿಗಳನ್ನು ಕರೆಯುವುದಕ್ಕೆ ಬಂದವನು*" ಎಂಬುದಾಗಿಯೇ ಈ ಉಭಯರೂ ಭಾವಿಸಿದ್ದರೆಂದು ಇವರು ಮಾಡಿರುವ ಮಹತ್ತರವಾದ ಕಾರ್ಯಗಳಿಂದ ವ್ಯಕ್ತವಾಗುತ್ತದೆ. ಏಕೆಂದರೆ, ಉಭಯರೂ ದಯಾನಿಧಿಗಳೇ ಆಗಿದ್ದರು. ಆ ವಿಶ್ವಪ್ರೇಮವೇ ಬಸವಣ್ಣನವರ

* ಮತ್ತಾಯ. ೯. ೧೩.

ರೂಪದಲ್ಲಿ ಅವತರಿಸಿದ್ದಿತು. ಆದುದರಿಂದಲೇ ಅವರಿಗೆ ಎಲ್ಲೆಲ್ಲಿಯೂ ಸಂಗಮೇಶನೇ ತೋರುತ್ತಿದ್ದನು. ಈ ಕೆಳಗಿನ ವಚನಗಳಮೇಲಿಂದ ಈ ಮಹಾನುಭಾವರ ಧಾರ್ಮಿಕ ಮತ್ತು ದೈನಿಕ ವಿಚಾರಗಳು ಎಂತಹ ಶ್ರೇಷ್ಠ ತರವಾದವುಗಳಾಗಿದ್ದವೆಂಬುದು ಸ್ಪಷ್ಟ ವಾಗುತ್ತದೆ.

> ದಯವಿಲ್ಲದ ಧರ್ಮವದಾವುದಯ್ಯ ? ದಯವಿರಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯ. ಕೂಡಲ ಸಂಗಮದೇವರಂತಲ್ಲದೊಲ್ಲನಯ್ಯ.

> ಎತ್ತೆತ್ತ ನೋಡಿದಡತ್ತತ್ತ ನೀನೇದೇವಾ. ಸಕಲ ವಿಸ್ತಾರದರುಹೂ ನೀನೇ ದೇವಾ. ವಿಶ್ವತೋಚಕ್ಷು ನೀನೇ ದೇವಾ. ವಿಶ್ವತೋಮುಖ ನೀನೇ ದೇವಾ. ವಿಶ್ವತೋಬಾಹು ನೀನೇ ದೇವಾ. ವಿಶ್ವತೋಪಾದ ನೀನೇ ದೇವಾ. ಕೂಡಲ ಸಂಗಮದೇವಾ.

ಜ್ಞಾನ ಮಾರ್ಗದಲ್ಲಿ ಹೋದ ಬುದ್ಧನು ತಾನು ಬುದ್ಧ (ಜ್ಞಾನಿ) ಎಂದು ಹೇಳಿಕೊಂಡನು. ಆದರೆ ಬಸವಣ್ಣನವರು ತಾವು ಭಕ್ತಿಮಾರ್ಗದಲ್ಲಿ ಹೋಗಿ ಭಕ್ತಾಗ್ರಣ್ಯರಾಗಿದ್ದರೂ ಅವರಿಗೆ ತಾನು ಭಕ್ತ ನೆಂಬ ಭಾವನೆಯೇ ಉಂಟಾಗಿರಲಿಲ್ಲ. ಇದಲ್ಲವೇ ಭಕ್ತ ಶಿರೋಮಣಿಗಳ ಲಕ್ಷಣವು ? ಇವರು ತಮ್ಮನ್ನು ಕುರಿತು ಈ ಪ್ರಕಾರ ಹೇಳಿಕೊಂಡಿದ್ದಾರೆ.

> ಭಕ್ತಿಯಿಲ್ಲದ ಬಡವನಾನಯ್ಯ. ಕಕ್ಕಯ್ಯನ ಮನೆಯಲ್ಲು ಬೇಡಿದೆ. ದಾಸಯ್ಯನ ಮನೆಯಲ್ಲು ಬೇಡಿದೆ. ಚೆನ್ನಯ್ಯನ ಮನೆಯಲ್ಲು ಬೇಡಿದೆ. ಎಲ್ಲಾ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ, ಎನ್ನಪಾತ್ರೆ ತುಂಬಿತ್ತು ಕೂಡಲ ಸಂಗಮದೇವಾ.

> ಎನಗಿಂತ ಕಿರಿಯರಾರಿಲ್ಲ. ಶಿವಭಕ್ತರಿಗಿಂತ ಹಿರಿಯರಾರಿಲ್ಲ. ನಿಮ್ಮ ಪಾದಸಾಕ್ಷಿ. ಎನ್ನಮನಸಾಕ್ಷಿ. ಕೂಡಲ ಸಂಗಮದೇವಾ ಎನಗಿದೇ ದಿಬ್ಯ.

> ಬ್ರಹ್ಮಪದವಿಯನೊಲ್ಲೆ. ವಿಷ್ಣುಪದವಿಯನೊಲ್ಲೆ. ರುದ್ರಪದವಿಯನೊಲ್ಲೆ. ನಾನಾ ಮತ್ತಾವ ಪದವಿಯನೊಲ್ಲೆನಯ್ಯ. ಕೂಡಲಸಂ

ಗಮದೇವಾ. ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯನೇ ಕರುಣಿಸಯ್ಯ.

ಈ ಮಹಾನುಭಾವರ ಅಸಾಧಾರಣವಾದ ಸಾತ್ವಿಕ ವೃತ್ತಿಯ ಪ್ರಭಾವದಿಂದಲೂ ವೀರಶೈವಮತತತ್ವಗಳ ಸಹಾಯದಿಂದಲೂ, ಆ ಕಲ್ಯಾಣಪಟ್ಟಣದಲ್ಲಿ ಪ್ರತಿನಿತ್ಯ ಸಹಸ್ರಾವಧಿಜನಗಳಿಗೆ ಸುಖಭೋಜನವು ದೊರೆಯುತ್ತಿದ್ದಿತಲ್ಲದೆ ಶ್ರೀ ಪ್ರಭುದೇವರು, ಶ್ರೀ ಚೆನ್ನಬಸವಣ್ಣನವರು, ಶ್ರೀ ಸಿದ್ಧರಾಮ ಶಿವಯೋಗಿಗಳು ಮೊದಲಾದ ಅನೇಕ ಶಿವಾನುಭಾವಿಗಳ ಮತೋಪದೇಶವೂ ಪ್ರಾಪ್ತವಾಗುತ್ತಿದ್ದಿತು. ಎಲ್ಲೆಲ್ಲಿಯೂ ಪ್ರತಿನಿತ್ಯ ಗಣ ಸಂತರ್ಪಣೆ, ಮತೋಪದೇಶಗಳ ಸಂಭ್ರಮವೇ ನಡೆಯುತ್ತಿದ್ದುದನ್ನು ನೋಡಿ ತಿಂಗಳೊಂದಕ್ಕೆ ಒಂದು ಸಾವಿರ ಹೊನ್ನಿನ ವೇತನವುಳ್ಳ ಈ ಬಸವಣ್ಣನವರಿಂದ ಇಷ್ಟೆಲ್ಲಾ ವೈಭವಗಳು ಜರುಗುವುದು ಸಾಧ್ಯವೇ ? ರಾಜಧಾನಿಯ ದ್ರವ್ಯವನ್ನೆಲ್ಲಾ ಸ್ವೇಚ್ಛೆಯಾಗಿ ಸೂರೆಮಾಡುತ್ತಿರುವುದರಿಂದಲೇ ಈ ಪ್ರಕಾರ ನಡೆದಿದೆಯೆಂದು ಆ ಕಾಲದಲ್ಲಿ ಹೇಗೆ ಅನೇಕರು ಭಾವಿಸಿದ್ದರೋ ಹಾಗೆಯೇ ಈ ಕಾಲದಲ್ಲಿಯೂ ಅನೇಕರು ಬರೆಯುತ್ತಿದ್ದಾರೆ. ಇಂಥವರಿಗೆ ನಿಸ್ಪೃಹತೆಯ ಪ್ರಭಾವವು ಮತ್ತು ವೀರಶೈವ ಮತದಲ್ಲಿರುವ ರಹಸ್ಯವು ಗೊತ್ತಿಲ್ಲವೆಂದೇ ಹೇಳಬೇಕಾಗುತ್ತದೆ.

ವೀರಶೈವರಿಗೆ ಕಾಯಕವೇ ಕೈಲಾಸ. ತಾನು ಕೈಮುಟ್ಟಿ ಯಾವುದಾದರೊಂದು ಅನ್ಯರಿಗೆ ಅಪಾಯವಿಲ್ಲದ ಕೆಲಸವನ್ನು ಮಾಡಿ ಅದರಿಂದ ಸಂಪಾದನೆ ಯಾದುದನ್ನೇ ಗುರುಲಿಂಗಜಂಗಮ ಸೇವೆಗರ್ಪಿಸಿ ತಾನು ಜೀವಿಸಬೇಕು. ವೀರಶೈವನಿಗೆ ಈ ಸ್ವಾವಲಂಬನೆಯೇ ಜೀವನದ ಮುಖ್ಯೋಪಾಯವಾಗಿದೆ. ಆದುದರಿಂದ ಕಾಯಕಗಳಲ್ಲಿ ಶ್ರೇಷ್ಠ ಕನಿಷ್ಠಗಳೆಂಬ ಭಿನ್ನ ಭೇದಗಳನ್ನು ವೀರಶೈವನು ಮಾಡುವುದಿಲ್ಲ. ಒಕ್ಕಲತನವನ್ನು ಮಾಡುವುದಾಗಲಿ, ಒಡಗೀನವನ್ನು ಮಾಡುವುದಾಗಲಿ, ಒಟ್ಟೆಯನ್ನು ಹೊಲಿಯುವುದಾಗಲಿ, ನೇಯುವುದಾಗಲಿ, ಕ್ಷೌರವನ್ನು ಮಾಡುವು

ದಾಗಲಿ ಇವುಗಳೆಲ್ಲಾ ಸಮಾನವಾದ ಕಾಯಕಗಳೇ ಆಗಿವೆ. ಆಚಾರ ಗುಣಸ್ವಭಾವಗಳು ಮುಖ್ಯ ವಾದವುಗಳೇವಿನಾ ಮನುಷ್ಯನ ಆತ್ಮೋನ್ನತಿಗೆ ಈ ಕಾಯಕಗಳೇನೂ ಕಾರಣವಾಗಿಲ್ಲ. ಆದುದರಿಂದಲೇ ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು ತೊಳೆಯುತ್ತಿದ್ದರು. ಮೋಳಿಗೆ ಮಾರಯ್ಯನವರು ಕಟ್ಟಿಗೆ ಹೊರೆಗಳನ್ನು ತರುತ್ತಿದ್ದರು. ಜೇಡರ ದಾಸಯ್ಯನವರು ಬಟ್ಟೆಗಳನ್ನು ನೇಯುತ್ತಿದ್ದರು. ಶಂಕರ ದಾಸಯ್ಯನವರು ಸೂಜಿಯುಕಾಯಕ ಎಂದರೆ ಬಟ್ಟೆಗಳನ್ನು ಹೊಲೆಯುವ ಕೆಲಸಮಾಡುತ್ತಿದ್ದರು. ಈ ಪ್ರಕಾರ ಸಕಲ ಶರಣರೂ ಒಂದೊಂದು ಕಾಯಕವನ್ನವಲಂಬಿಸಿಯೇ ಗುರುಲಿಂಗಜಂಗಮ ಸೇವಾತತ್ಪರರಾಗಿರುತ್ತಿದ್ದರು. ಏಕೆಂದರೆ, ಕಾಯಕವು ವೀರಶೈವ ಮತದಲ್ಲಿ ಬಹು ಮುಖ್ಯವಾದ ತತ್ವವಾಗಿದೆ. ಈ ವಿಷಯವಾಗಿ ಬಸವಣ್ಣನವರು ಹೇಳಿರುವುದೇನೆಂದರೆ :—

> ಕೃಷಿಕೃತ್ಯಕಾಯಕದಿಂದಾದೊಡೇನು ? ತನುಮನ ಬಳಲಿಸಿ ತಂದು ದಾಸೋಹವಮಾಡುವ ಪರಮುಸದ್ಭಕ್ತನ ತೋರಯ್ಯಎನಗೆ. ಅದೆಂತೆನೆ ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶುದ್ಧ, ನುಡಿಎಲ ಪಾವನವು. ಆತನಿಗೆ ಉಪದೇಶಮಾಡಿದಾತನೆ ಪರಮಸದ್ಗುರು. ಅಂತಹ ಸದ್ಭಕ್ತನ ಮನೆಯೆ ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯಮಾಡುವ ಜಂಗಮವೇ ಜಗತ್ಪಾವನ. ಇಂತಪ್ಪನವರ ನಾನು ನೆರೆನಂಬಿ ನಮೋ ನಮೋ ಎಂಬೆನಯ್ಯ ಕೂಡಲ ಸಂಗಮದೇವಾ.

ಕೈಕಸಬು ವೀರಶೈವರಿಗೆ ಇಷ್ಟು ಪ್ರಾಮುಖ್ಯವಾದುದಾಗಿದ್ದುದರಿಂದ ಆ ಕಲ್ಯಾಣಪಟ್ಟಣದಲ್ಲಿದ್ದ ವೀರಶೈವರು ತಮ್ಮ ತಮ್ಮ ಕಸಬುಗಳನ್ನು ಮಾಡುತ್ತ ಬಂದಾದಾಯದಲ್ಲಿ ಜಂಗಮಕ್ಕೆ ಧನವನ್ನು ಅರ್ಪಿಸಬೇಕಾಗಿದ್ದುದರಿಂದ ಆ ಜಂಗಮದಾಸೋಹಕ್ಕೆ ಸ್ವಲ್ಪವಾದರೂ ಧನವನ್ನು ಸಲ್ಲಿಸುತ್ತಲೇ ಇದ್ದರು. ಈ ಗುರುಕಾರ್ಯಕ್ಕೆ ಅನೇಕರು ತಮ್ಮ ತನುವನ್ನು ದಂಡಿಸುತ್ತಿದ್ದರು. ಈ ಎಲ್ಲಾ ಕಾಯಕಗಳಾದರೋ ಕೇವಲ ವೀರಶೈವರಲ್ಲಿಯೇ ಪರಸ್ಪರ ನಡೆಯುತ್ತಿದ್ದವೇವಿನಾ ಅನ್ಯಮತೀಯರಸಂಗಡ

ನಡೆಯುತ್ತಿರಲಿಲ್ಲ. ಆದುದರಿಂದ ಆ ಪಟ್ಟಣದಲ್ಲಿದ್ದ ವೀರಶೈವ ಜನಾಂಗವೇ ಒಂದು ವಿಶಾಲವಾದ ಕಟುಂಬದಂತಿದ್ದಿತು. ಇಂತಹ ಸ್ಥಿತಿಯಲ್ಲಿ ಆ ಉದಾರಚರಿತರಾದ ಬಸವಣ್ಣನವರು ಮತಸೇವೆಗೆ ಸಿದ್ಧರಾಗಿದ್ದಾಗ ಸಹಸ್ರಾವಧಿ ಜನಗಳು ಪ್ರತಿನಿತ್ಯ ಸುಖಭೋಜನದಿಂದ ಸಂತುಷ್ಟರಾಗುತ್ತಿದ್ದುದೊಂದಾಶ್ಚರ್ಯವೇ ? ಈ ಕಾಲದಲ್ಲಿ ಸಹ ಯಾರಾದರೂ ನಿಸ್ಪೃಹತೆಯಿಂದ ಒಂದುಕಡೆ ಆರಾಧನೆಯನ್ನು ಪ್ರಾರಂಭಿಸಿದರೆ ಅದು ದಿನೇ ದಿನೇ ಬೆಳೆಯುತ್ತ ಎಷ್ಟೋ ಅದ್ಭುತವಾಗುತ್ತಿರುವಾಗ ಶ್ರೀ ಪ್ರಭುದೇವರಂತಹ ಜ್ಞಾನಿಗಳು, ಬಸವಣ್ಣನವರಂತಹ ಭಕ್ತರು, ಸಿದ್ಧರಾಮ ಶಿವಯೋಗಿಗಳಂತಹ ಶರಣರು ಇದ್ದ ಆ ಕಲ್ಯಾಣಪಟ್ಟಣದಲ್ಲಿ ಆ ಪ್ರಕಾರ ಜಂಗಮ ಸಂತರ್ಪಣೆಯು ವೈಭವದಿಂದ ನಡೆದುದು ಅಗಾಧವೇ ? ಅವರಿಗೆ ಬಿಜ್ಜಳರಾಜನ ಬೊಕ್ಕಸವು ಬೇಕಾಗಿದ್ದಿತೇ ? ಬಿಜ್ಜಳರಾಜನ ದ್ರವ್ಯವನ್ನೆಲ್ಲಾ ಬಸವನು ಹಾಳು ಮಾಡುತ್ತಾನೆಂದು ಆಗ ಜನರು ಆಡುತ್ತಿದ್ದುದನ್ನು ನೋಡಿಯೇ ಬಸವಣ್ಣನವರು ಹೇಳಿರುವುದೇನೆಂದರೆ :—

> ಊರಮುಂದೆ ಹಾಲಹಳ್ಳ ಹರಿವುತ್ತಿರಲಿ, ನಾಳೆ ಆವಿನ ಬೆನ್ನಮೇಲೆ ಹರಿಯಲಿ. ಅದೇಕಯ್ಯ, ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ? ಕೂಡಲಸಂಗಮದೇವ ರುಳ್ಳನ್ನಕ್ಕರ ಬಿಜ್ಜಳನ ಭಂಡಾರ ಎನಗೇಕಯ್ಯ ?

ಬಸವನು ಕಂಡ ಕಂಡವರಿಗೆಲ್ಲಾ ಲಿಂಗವನ್ನು ಕಟ್ಟಿ ಆಮೇಲೆ ಅವರು ಹೇಗೆ ನಡೆದರೂ ಅವರು ಶಿವಶರಣರೆಂದೇ ತಿಳಿದು ಮೂಢಭಕ್ತಿಯಿಂದಾಚರಿಸುತ್ತಿದ್ದನೆಂತಲೂ ಅನೇಕರು ಹೇಳುತ್ತಿದ್ದಾರೆ. ಬಸವಣ್ಣನವರ ಈ ಕೆಳಗಿನ ವಚನಗಳೇ ಇಂಥ ದೋಷಾರೋಪಣೆಗೆ ಉತ್ತರವಾಗಿರುವಾಗ ಹೆಚ್ಚು ವಿವರಿಸಬೇಕಾದುದೇ ಇಲ್ಲ.

> ಕುಂಬಳಕಾಯಿಗೆ ಕಬ್ಬುನದಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೇ ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯೆಂತಹುದೋ ? ಮುನ್ನಿನಂತೆ ಕೂಡಲಸಂಗಯ್ಯ, ಮಾನಹೀನನ ಮಾಸಲ ಕಾಯ್ಬಿರಿಸಿದಂತೆ.

ಸದಾಚಾರಸದ್ಭಕ್ತಿ ಇಲ್ಲದವರ ನಾನೊಲ್ಲೆನಯ್ಯ. ಅವರಾರಾಧನೆದಂಡ. ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲನಯ್ಯ. ಕೂಡಲ ಸಂಗಮದೇವಾ ಭೂಮಿಭಾರಕರ.

ನೂರನೋದಿ ನೂರಕೇಳಿದರೇನು? ಆಶೆಹರಿಯದು. ರೋಷಬಿಡದು. ಮಜ್ಜನಕ್ಕೆರೆದು ಫಲವೇನು? ಮಾತಿನಂತೆಮನನಿಲ್ಲದ ಜಾತಿಡೊಂಬರ ನೋಡಿನಗುವ ನಮ್ಮ ಕೂಡಲಸಂಗಮದೇವಾ.

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿತಪ್ಪಿದರೆ ಹಿಡಿದಿರ್ಪಲಿಂಗವು ಘಟಸರ್ಪ ನೋಡಯ್ಯ. ನುಡಿಯಲುಬಾರದು. ನಡೆಯಲುಬಾರದು. ಲಿಂಗದೇವನೇ ದಿವ್ಯಅಯ್ಯ. ಬಡವನಕೋಪದವಡಿಗೆಮೃತ್ಯುವಾದಂತೆ ಕಡೆಗೆದಾಂಟದು ಕಾಣಾ ಕೂಡಲಸಂಗಮದೇವಾ.

ಮಹಾನುಭಾವರಾದ ಬಸವಣ್ಣನವರಿಂದ ವೀರಶೈವಮತ ಪ್ರಸಾರ ವಾಗಲು ಈ ಕೆಳಗಿನ ಕಾರಣಗಳೇ ಮುಖ್ಯವಾಗಿದ್ದವೆಂಬುದು ಈವರೆಗಿನ ವಿವರಣೆಯಿಂದ ವಾಚಕರಿಗೆ ವೇದ್ಯವಾಗದಿರಲಾರದು.

(೧) ಬಸವಣ್ಣನವರಲ್ಲಿ ದೃಢತರವಾದ ದೈವಭಕ್ತಿ ಇದ್ದಿತು. ಆ ಭಕ್ತಿಯು ಅವರಲ್ಲಿ ಅಸಾಧಾರಣವಾದ ಆತ್ಮಕಳೆಯನ್ನು, ಜನಗಳಲ್ಲಿ ಅವರ ವಿಷಯಕ್ಕೆ ವಿಶೇಷತರವಾದ ಪೂಜ್ಯಬುದ್ಧಿಯನ್ನು ಉಂಟುಮಾಡಿತು.

(೨) ಬಸವಣ್ಣನವರು ತಾವು ಶ್ರೇಷ್ಠವರ್ಣದಲ್ಲಿ ಹುಟ್ಟಿದವರಾಗಿ ಶ್ರೇಷ್ಠಪದವಿಯಲ್ಲಿದ್ದು ಮಹಾಶಿವಭಕ್ತರೆಂಬ ಕೀರ್ತಿಯನ್ನು ಹೊಂದಿದ್ದರು ಕೂಡಾ ಎಂತಹ ಕೀಳುಕುಲದವನು ವೀರಶೈವನಾದರು ಆತನ ಸಂಗಡ ಕಿಂಕರಭಾವದಿಂದಲೇ ನಡೆದುದು.

(೩) ವೀರಶೈವ ಮತದಲ್ಲಿ ಸೇರಲು ಕುಲಕಸಬುಗಳ ಪ್ರತಿಬಂಧ ವಿಲ್ಲದೆ ಆಚಾರಗುಣಸ್ವಭಾವಗಳಿಗೇನೇ ಪ್ರಾಮುಖ್ಯತೆಯಿದ್ದುದು.

(೪) ಪ್ರತಿನಿತ್ಯದಲ್ಲಿ ಊಟೋಪಚಾರಗಳಿಗೂ, ಜನಸಾಮಾನ್ಯ ರಿಗೂ ಕೂಡಾ ತಿಳಿಯುವಂತೆ ಮತೋಪದೇಶ ಮಾಡುವುದಕ್ಕೂ ವಿಶೇಷ ತರವಾದ ಸೌಲಭ್ಯಗಳನ್ನುಂಟುಮಾಡಿದ್ದುದು.

## ೬ ನೆಯ ಪ್ರಕರಣ.

## ಪ್ರಯಾಣ.

---

ಶ್ರೀ. ಬಸವಣ್ಣನವರು ಈಪ್ರಕಾರ ವೀರಶೈವಮತ ಪ್ರಸಾರಮಾಡುತ್ತಿದ್ದುದನ್ನು ನೋಡಿ ಸಹಿಸಲಾರದೆ ಕೊಂಡಿ ಮಂಚಣ್ಣನವರೇ ಮೊದಲಾದ ವಿರೋಧಿಗಳು ಬಿಜ್ಜಳರಾಜನಲ್ಲಿ ನಾನಾಚಾಡಿಗಳನ್ನು ಹೇಳಿದುದರಲ್ಲಿ ಆಶ್ಚರ್ಯವೇನು? ಆಗ ರಾಜನಿಗೂ ಬಸವಣ್ಣನವರಿಗೂ ಭಿನ್ನಾಭಿಪ್ರಾಯ ವುಂಟಾಗುವುದು ಸ್ವಾಭಾವಿಕವಷ್ಟೆ. ಆದುದರಿಂದ ಬಿಜ್ಜಳರಾಜನು ಬಸವಣ್ಣನವರಿಗೆ ಭಯಗೊಳಿಸಿದನೆಂತಲೂ ಆಗ ಬಸವಣ್ಣನವರು ಓಡಿಹೋಗಲು ಅವರನ್ನು ಹಿಡಿದು ತರಲಿಕ್ಕೆ ಹೋದವರನ್ನು ಬಸವಣ್ಣನವರು ಓಡಿಸಿಬಿಟ್ಟರೆಂತಲೂ, ಆಗ ಬಿಜ್ಜಳರಾಜನು ತಾನೇ ಹೋಗಲು ಬಸವಣ್ಣನವರ ಕಡೆಯವರು ಬಿಜ್ಜಳರಾಜನನ್ನು ಕೂಡಾ ಸೋಲಿಸಿಬಿಟ್ಟರೆಂತಲೂ, ಆದುದರಿಂದ ಪುನಃ ಬಸವಣ್ಣನವರು ಹೇಳಿದಂತೆಯೇ ರಾಜನು ಕೇಳಬೇಕಾಯಿತೆಂತಲೂ, ಡಾಕ್ಟರ್ ಭಾಂಡಾರಕರ್‌ರವರೇ ಮೊದಲಾದವರು ಬರೆದಿದ್ದಾರೆ. ಧರಣಿಪಂಡಿತನಾದರೋ ಬಸವಣ್ಣನವರೇ ಸೋತರೆಂತಲೂ ಬಿಜ್ಜಳನು ಇವರ ತಪ್ಪನ್ನು ಮನ್ನಿಸಿ ಪುನಃ ಕೆಲಸವನ್ನು ಕೊಟ್ಟನೆಂತಲೂ ಬರೆದಿದ್ದಾನೆ.

ಈ ಪ್ರಕಾರ ಬಿಜ್ಜಳರಾಜನಿಗೂ ಬಸವಣ್ಣನವರಿಗೂ ಯುದ್ಧ ನಡೆದುದು ನಿಜವೆಂದು ನಂಬಲಿಕ್ಕಾಗುವುದಿಲ್ಲ. ಮಹಾಚತುರಂಗಬಲದಿಂದ ತೈಲಪರಾಜನನ್ನು ಓಡಿಸಿದ ಬಿಜ್ಜಳರಾಜನಿಗೆ ನಿರಾಯುಧರಾಗಿದ್ದ ಬಸವಣ್ಣನವರನ್ನು ಹಿಡಿದುತರುವುದು ಅಸಾಧ್ಯವಾಯಿತೆಂತಲೂ ಅದಕ್ಕೋಸ್ಕರ ಇವರು ಹೇಳಿದಂತೆ ಕೇಳುವ ಪ್ರಸಂಗ ಬಂದಿತೆಂತಲೂ ಬರೆದುದನ್ನು ನಂಬಲಿಕ್ಕಾಗುವುದೇ? ಧರಣಿಪಂಡಿತನಂತೂ ಬಸವಣ್ಣನವರ ವಿಷಯದಲ್ಲಿ ಹಾಗೆ ಬರೆದು ಬಿಜ್ಜಳರಾಜನ ಶ್ರೇಷ್ಠತ್ವವನ್ನು ತೋರಿಸಿದುದರಲ್ಲಿ ಆಶ್ಚರ್ಯವೇನು?

ಈ ವಿಷಯವಾಗಿ ಸಿಂಗಿರಾಜಪುರಾಣದ ಮೂವತ್ತೊಂದನೆಯ ಸಂಧಿಯಲ್ಲಿ ರುವುದೇನೆಂದರೆ "ಬಿಜ್ಜಳರಾಜನು ಬಸವಣ್ಣನವರಿಗೆ ನೀವು ಜಂಗಮರ ಸಹವಾಸವನ್ನೇ ಬಿಡುವುದಾದರೆ ಮಂತ್ರಿಗಳಾಗಿ ಕೆಲಸಮಾಡಿರಿ. ಇಲ್ಲ ದಿದ್ದರೆ ಮುದ್ರೆಯುಂಗರವನ್ನು ಕೊಟ್ಟು ಮಂತ್ರಿಪದವಿಯನ್ನು ಬಿಟ್ಟುಬಿಡಿ ರೆಂದು ಹೇಳಲು, ಆ ಮಂತ್ರಿತ್ವವನ್ನು ಬಿಟ್ಟು ,, ಆರು ಮುನಿದೆಮ್ಮನೇನು ಮಾಡುವರು ? ಊರವುಸದೆಮ್ಮನೇತುಮಾಡುವುದಯ್ಯ ? ಕೊಡಬೇಡನಮ್ಮಕುನ್ನಿಗೆ ತುಸು ಇಡಬೇಡ ನಮ್ಮ ಶುನಕಗೆ ತಳಿಗೆಯ. ಆನೆಯೇರಿ ಹೋಹಾತನ ಶ್ವಾನಕಚ್ಚ ಬಲ್ಲುದೆ, ನಮಗೆ ನಮ್ಮ ಕೂಡಲಸಂಗಮನುಳ್ಳನ್ನಕ್ಕರ !" ಎಂದು ಹೇಳುತ್ತ ತಮ್ಮ ಉಭಯ ಪತ್ನಿಯರನ್ನೂ, ಮಗನಾದ ಬಾಲಸಂಗನನ್ನೂ, ಅಕ್ಕನಾಗಮ್ಮ, ಅವರ ಪತಿಯಾದ ಶಿವಸ್ವಾಮಿ ಮತ್ತು ಚೆನ್ನಬಸವಣ್ಣ ಇವರುಗಳನ್ನೂ ಕರೆದುಕೊಂಡು ಸಂಗಮಕ್ಷೇತ್ರಕ್ಕೆ ನಡೆದುಕೊಳ್ಳುತ್ತಾ ಹೋದರು. ಮತ್ತಿ ಘಟ್ಟ ಎಂಬಲ್ಲಿ ವಸ್ತಿಮಾಡಿವಾಗ ಕಲ್ಯಾಣದಿಂದ ಹಾಲಿನ ಸ್ವಾಮಿ ಎಂಬು ವವರು ಬಸವಣ್ಣನವರನ್ನು ಹುಡುಕುತ್ತಾ ಬರಲು ಅವರಸಂಗಡ ಸರ್ವಾಭರ ಣವನ್ನು ಮತ್ತು ಶಿವಸ್ವಾಮಿಗಳನ್ನು ಕಲ್ಯಾಣದಲ್ಲಿ ಮಹಾಧನಿಕನಾಗಿದ್ದ ಸಿದ್ಧಿಗಶೆಟ್ಟಿಯಕಡೆಗೆ ಕಳುಹಿಸಿ ವಿಶೇಷವಾದ ದ್ರವ್ಯವನ್ನು ತರಿಸಿಕೊಂಡು ಅಲ್ಲಿಯೇ ದಾಸೋಹನಿರತರಾಗಿದ್ದಾಗ ಬಿಜ್ಜಳರಾಜನು ಪುನಃ ಕರೆಸಿಕೊಂ ಡನು." ಎಂದು ಬಹು ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ಈ ಸಂಗ ತಿಯು ಸಂಭವನೀಯವಾದುದಾಗಿ ತೋರುತ್ತದೆ. ಬಸವಣ್ಣನವರಿಗೆ ಪ್ರತಿ ಯಾಗಿ ಚೆನ್ನಬಸವಣ್ಣನವರು ಕೆಲವುಕಾಲ ಮಂತ್ರಿತ್ವವನ್ನು ನಡೆಸಿದ್ದಾರಷ್ಟೆ. ಆದುದರಿಂದ ಪ್ರಾಯಶಃ ಇದೇ ಸಂದರ್ಭದಲ್ಲಿ ಬಸವಣ್ಣನವರು ತಮ್ಮ ಮಂತ್ರಿತ್ವವನ್ನು ಬಿಟ್ಟು ಕೇವಲ ಮತಪ್ರಸಾರ ಕಾರ್ಯದಲ್ಲಿಯೇ ಆಸಕ್ತರಾ ಗಿರಬಹುದು. ಅಂತು ಯಾವ ಮತಪ್ರಸಾರಕ್ಕೋಸ್ಕರವಾಗಿಯೇ ಬಸವ ಣ್ಣನವರು ಕೆಲವುಕಾಲ ಬಿಜ್ಜಳರಾಜನ ಮಂತ್ರಿಗಳಾಗಿದ್ದರೋ ಅದೇ ಕಾರ್ಯದ ದೆಸೆಯಿಂದ ಆ ಮಂತ್ರಿತ್ವವನ್ನೂ ಬಿಡುವ ಪ್ರಸಂಗಬಂದು ದೇನೋ ನಿಜ.

ಆಗ ಅಂತ್ಯಜಾದಿಯಾಗಿ ಯಾರು ವೀರಶೈವರಾದರು ಅವರ ಪೂರ್ವ ಕುಲಗೋತ್ರಾದಿಗಳನ್ನು ಎಣಿಸದೆ ಸಹಭೋಜನಾದಿ ಸವ್ಯವಹಾರಗಳನ್ನು ಅವರ ಸಂಗಡ ಯಾವ ಭಿನ್ನಭೇದಗಳನ್ನೂ ಮಾಡದೆ ನಡೆಸುತ್ತಿದ್ದರು. ವೀರಶೈವರಾದವರೆಲ್ಲರೂ ಒಂದೇ ಎಂಬುವುದನ್ನು ತೋರಿಸುವುದಕ್ಕೆ ಇಷ್ಟೇ ಸಾಕಾಗಿರಲಿಲ್ಲ. ಈ ಸಹಭೋಜನದಂತೆಯೇ ಶರೀರಸಂಬಂಧವೂ ನಡೆಯಬೇಕಾಗಿದ್ದಿತು. ಏಕೆಂದರೆ ಈ ವಿಷಯವಾಗಿ ಬಸವಣ್ಣನವರು ಹೇಳಿರುವುದೇನೆಂದರೆ:—

ದೇವ ದೇವ ಬಿನ್ನಪವ ಅವಧಾರು. ವಿಪ್ರಮೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲರನೊಂದೇ ಎಂಬೆ. ಹೀಗೆಂದು ನಂಬು ವುದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು ಸಂದೇಹ ವುಳ್ಳರೆ ನೀನಂದೇಮೂಗಕೊಯ್ಯ ಕೂಡಲಸಂಗಮದೇವಾ.

ಆವಕುಲವಾದರೇನು ? ಶಿವಲಿಂಗವಿದ್ದವನೇ ಕುಲಜನು. ಕುಲವನರ ಸುವರೇ ಶರಣರಲ್ಲಿ ಜಾತಿಸಂಕರನಾದಬಳಿಕ ? ಶಿವೇಜಾತೇಃ ಕುಲೇಧರ್ಮ ಪೂರ್ವಜನ್ಮವಿವರ್ಜಿತಃ | ಉಮಾಮಾತಾ ಪಿತಾರುದ್ರ ಈಶ್ವರಃಕುಲ ಮೇವಚ ‖ ಎಂದುದಾಗಿ ಒಕ್ಕದ ಕೊಂಬೆನವರಲಿ ಕೂಸಕೊಡುವೆ. ಕೂಡಲಸಂಗಮದೇವಾ ನಂಬುವೆನು ನಿಮ್ಮಯ ಶರಣರನು.

ಆದುದರಿಂದ ಪ್ರಾಚೀನ ವೈದಿಕ ಪದ್ಧತಿಯನ್ನು ಜೀರ್ಣೋ ದ್ಧಾರಮಾಡುವ ಶ್ರೇಷ್ಠವಾದ ವಿವಾಹವೂ ಈ ಮಹಾನುಭಾವರ ಕಾಲದಲ್ಲಿ ಜರುಗಿತು. ಈ ವಿಷಯವಾಗಿ ಶರಣಲೀಲಾಮೃತ ಗ್ರಂಥದ ಏಳನೆಯ ಸಂಧಿಯಲ್ಲಿ ಉಕ್ತವಾಗಿರುವುದೇನೆಂದರೆ:—

"ಹರಳಯ್ಯನವರು ಒಂದು ದಿನ ಬಸವಣ್ಣನವರಿಗೆ ಶರಣಾರ್ಥಿ ಎನ್ನಲು ಅವರು ಶರಣು ಶರಣಾರ್ಥಿ ಎಂದು ಹೇಳಿದರು. ಆಗ ತನ್ನ ಮೇಲೆ ಒಂದು ಶರಣು ಹೆಚ್ಚಾಯಿತೆಂದು ಹರಳಯ್ಯನವರು ತಮ್ಮ ಬಲದೊಡೆಯ

ಮತ್ತು ತನ್ನ ಪತ್ನಿಯಾದ ಕಲ್ಯಾಣಮ್ಮ ನವರ ಎಡದೊಡೆಯ ಚರ್ಮವನ್ನು ತೆಗೆದು ಬಸವಣ್ಣನವರಿಗೆ ಪಾದರಕ್ಷೆಗಳನ್ನು ಮಾಡಿ ಅವುಗಳನ್ನು ಅವರಿಗೆ ಕೊಡಲಿಕ್ಕೆ ಹೋದಾಗ ಅವರು ಅವುಗಳನ್ನು ಪ್ರಯೋಗಿಸುವ ಯೋಗ್ಯತೆಯು ತನಗಿಲ್ಲವೆಂದು ಹೇಳಿ ಕಳುಹಿಸಿಕೊಟ್ಟರು. ಹರಳಯ್ಯನವರು ಅವುಗಳನ್ನು ತಿರುಗಿ ತೆಗೆದುಕೊಂಡು ಬರುವಾಗ ಮಧುವರಸನು ಹರಳಯ್ಯನವರನ್ನು ಕರೆದು ಆ ಜೋಡುಗಳನ್ನು ತನಗೆ ಕೊಡೆಂದು ಕೇಳಲು ಶರಣರು ಮೆಟ್ಟುವ ಜೋಡುಗಳಗೊಡವೆ ನಿಮಗೆ ಬೇಡವೆಂದು ಹರಳಯ್ಯನವರು ಹೇಳಿದರು. ಆದರೂ ಮಧುವರಸನು ಕೇಳದೆ ಅವುಗಳನ್ನು ತೆಗೆಯಿಸಿ ಮೆಟ್ಟಲು ಬಹು ತಾಪಗೊಂಡು ಬಳಲುವುದಕ್ಕಾರಂಭಿಸಿ ತನ್ನ ತಾಯಿಯಸಂಗಡ ಈ ಸಂಗತಿಯನ್ನು ಬಸವಣ್ಣನವರಿಗೆ ಹೇಳಿಕಳುಹಿಸಲು ಅವರು ನೀರನ್ನು ಎರೆದರೆ ಈ ರೋಗನಿವಾರಣೆಯಾಗುವುದೆಂದು ಹೇಳಿದರು. ಆಗ ಮಹಾದೇವಿ ಯೆಂಬ ಒಬ್ಬ ಲಿಂಗನಿಷ್ಠೆಯುಳ್ಳ ಭಕ್ತಳು ಆ ಬ್ರಾಹ್ಮಣನ ಮನೆಯಲ್ಲಿ ಕೆಲಸಕ್ಕಿದ್ದಳು. ಅವಳು ಪ್ರತಿನಿತ್ಯ ನೀರನ್ನು ತಂದು ಸ್ನಾನ ಮಾಡಿಸುತ್ತಿರುವಾಗ ಒಂದುದಿವಸ ಡೊಂಬರ ಆಟವನ್ನು ನೋಡುತ್ತಾ ನಿಂತುಕೊಳ್ಳಲು ಸಂಜೆಯಾಯಿತು. ಆಗ ನೀರು ತರಲಿಕ್ಕೆ ದೂರ ಹೋಗಲಾರದೆ ಹರಳಯ್ಯನವರ ಕೆರೆಯ ನೀರನ್ನು ತಂದು ಸ್ನಾನಮಾಡಿಸಲು ಕೂಡಲೇ ಮಧುವರಸನ ರೋಗವು ನಿವಾರಣೆಯಾಯಿತು. ಆಗ ಮಧುವರಸನು ಈ ನೀರನ್ನು ಎಲ್ಲಿಂದತಂದೆಯೆಂದು ಆ ಮಹಾದೇವಿಯನ್ನು ಕೇಳಲು ಅವಳು ನಿಜಾಂಶವನ್ನು ಹೇಳಲಾಗಿ ಮಹಾ ಮಹಿಮರಾದ ಆ ಹರಳಯ್ಯನವರನ್ನು ಕೀಳು ಕುಲದವರೆಂದು ನಿಂದಿಸಿದುದು ತಪ್ಪಾಯಿತೆಂದು ಮಧುವರಸನು ಚಿಂತಿಸಿ ಆ ಹರಳಯ್ಯನವರ ಮಗನಿಗೆ ತನ್ನ ಮಗಳನ್ನು ಕೊಡಬೇಕೆಂದು ನಿಶ್ಚಯಿಸಿ ಅವರಿಗೆ ಈ ಸಮಾಚಾರವನ್ನು ತಿಳಿಸಿದರು. ಆ ಹರಳಯ್ಯನವರು ನಿಮ್ಮ ಹೆಣ್ಣು ಬೇಡ. ನೀವು ಬ್ರಾಹ್ಮಣರು ; ಹರಿಪೂಜಕರು. ನಾವು ಹರಭಕ್ತರು. ಕೀಳುಕುಲದವರು. ನಮಗೆ ಹೆಣ್ಣುಕೊಟ್ಟರೆ ಜನರು ಮೆಚ್ಚು

ವರೇ ? ನಿಮ್ಮ ಬ್ರಾಹ್ಮಣರು ದೂರುಮಾಡದೆ ಬಿಡರು. ಎಂದು ಹೇಳಲು ಮಧುವರಸನು ಮನೆಗೆಬಂದು ಚಿಂತಿಸುತ್ತಿದ್ದುದನ್ನು ಆ ಮಹಾದೇವಿಯು ನೋಡಿ ಶರಣರಬಳಿಗೆಹೋಗಿ ಲಿಂಗಧಾರಣಮಾಡಿಕೊಂಡು ಬರುವುದೇ ವಿಹಿತವೆಂದು ಮಧುವರಸನಿಗೆ ತಿಳುಹಿಸಿದಳು. ಆಗ ಮಧುವರಸನು ಬಂದು ವೀರಶೈವಮತದೀಕ್ಷೆಯನ್ನು ಹೊಂದಿದನಂತರ ತನ್ನ ಮಗ ಳನ್ನು ಹರಳಯ್ಯನವರ ಮಗನಿಗೆಕೊಟ್ಟು ಸಂಭ್ರಮದಿಂದ ವಿವಾ ಹಮಾಡಿದನು. ”

ಇದರಮೇಲಿಂದ ಮೊದಲು ಮೋಚಿಗರಾಗಿದ್ದ ಹರಳಯ್ಯನವರಮಗ ನಿಗೂ ಬ್ರಾಹ್ಮಣನಾಗಿದ್ದ ಮಧುವರಸನಮಗಳಿಗೂ, ಉಭಯರೂ ವೀರಶೈವ ರಾದನಂತರ ಶರೀರಸಂಬಂಧವು ಜರುಗಿತೆಂದು ಸ್ಪಷ್ಟವಾಗುತ್ತದೆ. ಈ ಪ್ರ ಕಾರ ವಿವಾಹವಾದ ಸಮಾಚಾರವನ್ನು ಬಿಜ್ಜಳರಾಜನು ಕೇಳಿದನಂತರ ಬಿಜ್ಜಳರಾಜನಿಗು, ಆಗ ಮಂತ್ರಿಗಳಾಗಿದ್ದ ಚೆನ್ನಬಸವಣ್ಣನವರಿಗು, ಮತ್ತು ಹರಳಯ್ಯ ಮಧುವಯ್ಯಗಳಿಗು, ನಡೆದ ಸಂಭಾಷಣೆಗಳು ಶರಣಲೀಲಾಮೃ ತಗ್ರಂಥದ ಎಂಟನೆಯ ಸಂಧಿಯಲ್ಲಿ ವಿವರಿಸಲ್ಪಟ್ಟಿವೆ. ಅವುಗಳ ಮುಖ್ಯಾಂ ಶವೇನೆಂದರೆ :—

ಚೆನ್ನಬಸವಣ್ಣ—ರಾಜನು ಮಹಾ ಕೋಪಾವೇಶದಿಂದ ಮಾತ ನಾಡಿದುದನ್ನು ಚೆನ್ನಬಸವಣ್ಣನವರು ಕೇಳಿ ರಾಜನೇ ನಿನಗಿಷ್ಟು ಕೋಪ ವೇಕೆ ? ಅವರೇನು ಅರಮನೆಯ ದ್ರವ್ಯವನ್ನು ಅಪಹರಿಸಿದರೇ ? ಅರಸುತ ನಕ್ಕೆ ವಿರೋಧಮಾಡಿದರೇ ? ಪರರಸೊತ್ತನ್ನು ಹಾಳುಮಾಡಿದರೇ ? ತಪಸ್ಸು ತನ್ನಿಚ್ಛೆ, ಊಟವು ತನ್ನ ಮನದಿಚ್ಛೆ, ಎಂಬುದು ಲೋಕ ದನೀತಿಯಲ್ಲವೇ ?

ಬಿಜ್ಜಳರಾಜ—ಶ್ರೇಷ್ಠತರದ ಬ್ರಾಹ್ಮಣ ಕುಲದವರು ಅಂತ್ಯಜ ರಿಗೆ ಮಗಳನ್ನು ಕೊಡುತ್ತಿದ್ದರೆಯೇ ? ಶ್ರೇಷ್ಠಕುಲದವರು ಕಡೆಯ

ಜಾತಿಯರಿಗೆ ಹೆಣ್ಣು ಕೊಡುಕೊಂಬುವ ರೂಢಿಯು ಪ್ರಪಂಚದ ಲ್ಲುಂಟೇ ?

ಚೆನ್ನಬಸವಣ್ಣ—ಶಿವಭಕ್ತರ ಕುಲವನ್ನು ಕೇಳಬಹುದೇ ? ದ್ವಿಜ ರಲ್ಲಿ ಕುಲವುಂಟೇ ? ಕಶ್ಯಪ, ಕೌಂಡಿಣ್ಯ, ದೂರ್ವಾಸ, ವ್ಯಾಸ, ಶುಕ, ವಾಲ್ಮೀಕಿ ಮೊದಲಾದವರೆಲ್ಲಾ ಯಾವ ಕುಲದವರು ? ವಶಿಷ್ಠ ಅರುಂ ಧತಿ, ಜಮದಗ್ನಿ ರೇಣುಕೆ, ಇವರಾವ ಕುಲದವರು ? ದ್ವಿಜರಿಗೂ ಕಡೆಯ ಜಾತಿಯವರಿಗೂ ಕೊಡುಕೊಂಬುವ ರೂಢಿಯು ಪೂರ್ವ ದಿಂದಲೂ ಉಂಟು.

ಬಿಜ್ಜಳರಾಜ—ಶಿವಭಕ್ತರು ಹಚ್ಚೆಂಬ ನಿಮ್ಮ ಮಾತು ಸಾಕು. ಹಲವು ಕುಲಗಳನ್ನೆಲ್ಲಾ ಕೂಡಿಸಿ ಕುಲಗೆಡಿಸಿ ಪಟ್ಟಣವನ್ನೆಲ್ಲಾ ಹೊಲೆಗೆಳೆ ಸುವ ಛಲವು ನಿಮಗಿದೆಯೇ ? ಈ ನಡತೆಯನ್ನು ಕಟ್ಟುಮಾಡದೆ ಬಿಡುವೆನೇ? ಎಂದು ಹೇಳಿ ಆ ಮಧುವರಸನನ್ನು ಮತ್ತು ಶ್ವಪಚನನ್ನು ಹಿಡಿದು ಕೊಂಡು ಬನ್ನಿರೆಂದು ಚರರಿಗೆ ಆಜ್ಞಾಪಿಸಿದನು.

ಶರಣರು—ಹರಳಯ್ಯ ಮತ್ತು ಮಧುವಯ್ಯಗಳು ರಾಜನು ಕಳು ಹಿಸಿದ ಬರಹವನ್ನು ನೋಡಿ ಧರೆಯಾಟ ಪೂರೈಸಿತೆಂದು ಸಂತೋ ಷಪಟ್ಟು ಲಿಂಗಾರ್ಚನೆಯನ್ನು ಮಾಡಿ ನೈತ್ಯದಭೋಗವು ಸರಿಯಾಯಿತೇ ಗುರುವೇ ? ಎಂದು ಜಂಗಲಿಂಗಕ್ಕರ್ಪಿಸಿ ಹರನಾಮಸ್ಮರಣೆಮಾಡುತ್ತ ಮಡದಿ ಮಕ್ಕಳಿಗೆ ಬುದ್ಧಿಯ ಮಾತುಗಳನ್ನು ಹೇಳಿ ರಾಜಸಭೆಗೆ ಹೋದರು.

ಮಧುವಯ್ಯ—ರಾಜನು ಕೋಪಾವೇಶದಿಂದ ಗರ್ಜಿಸಿ ನುಡಿದು ದನ್ನು ಮಧುವಯ್ಯನವರು ಕೇಳಿ ರಾಜನೇ ನಿನಗಿಷ್ಟು ಕೋಪವೇಕೆ ? ಕೊಟ್ಟರೆ ನಾನು ಹೆಣ್ಣುಕೊಟ್ಟೆ, ಕೆಟ್ಟರೆ ನಾನುಕೆಟ್ಟೆ, ನಿನಗಿಷ್ಟು ಕೋಪವೇಕೆ ?

ಬಿಜ್ಜಳರಾಜ—ಎಲವೊ ಮಧುವರಸನೇ ? ನೀನು ಕುಲದಲ್ಲಿ ಬ್ರಾಹ್ಮಣ. ಹೊಲೆಯನಿಗೆ ಹೆಣ್ಣುಕೊಟ್ಟು ಕುಲವ ಕೆಡಿಸುವಿ ಯಾ ?

ಮಧುವಯ್ಯ—ರಾಜನೇ, ಹರಶರಣರಿಗೆ ಹೊಲೆಯರೆನ್ನಬಹುದೇ ? ಹೊಲೆಯರಾರು ? ಕುಲಗುರು ದೈವಗಳ ನೆಲೆಯರಿಯದ ಪಾಪಿಯೇ ಹೊಲೆಯನು. ಹರರನ್ನು ನಿಂದಿಸುವವನು ಹೊಲೆಯನು. ಹಸುವ ಕೊಲ್ಲುವವನು ಹೊಲೆಯನು. ಹುಸಿಯ ನುಡಿಯುವವನು ಹೊಲೆಯನು. ಪರಸತಿಯರನೋಡಿ ಪಾಪಕ್ಕೆಳಸುವವನು ಹೊಲೆಯನು. ನೀತಿ ಧರ್ಮಗಳರಿಯದೆ ಜೀವಹಿಂಸೆಮಾಡುವವ ಹೊಲೆಯನು.

ಬಿಜ್ಜಳರಾಜ—ಇವರಿಗೆ ಇಷ್ಟು ಧರ್ಮ ನೀತಿಗಳೇ ? ಇವರಿಗೆ ಎಳೆಹೂಟೆ ಶಿಕ್ಷೆಯನ್ನು ವಿಧಿಸುದ್ದೇನೆ. ಎತ್ತಿನಕಾಲಿಗೆ ಇವರನ್ನು ಕಟ್ಟಿ ಎಳೆಯಿರೆಂದು ರಾಜನು ಆಜ್ಞಾಪಿಸಿದನು.

ಶರಣರು—ಆಗ, ನಿನ್ನ ರಾಜ್ಯವು, ದೊರೆತನವು, ಹಾಳಾಗಿ ಹೋಗಲೆಂದು ಹರಳಯ್ಯನವರು ಬಿಜ್ಜಳನಿಗೆ ಶಪಿಸಿದರು. ಎತ್ತಿನ ಕಾಲಿಗೆ ಕಟ್ಟಿ ಎಳೆಯಲು, ಈ ಶರಣರು ಭೂಮಿಯ ಮುಟ್ಟದಿದ್ದುದನ್ನು ನೋಡಿ ರಾಜನು ಪುನಃ ಇವರ ಕಣ್ಣುಗಳನ್ನು ಕೀಳಿಸಿ ಶೂಲಕ್ಕೆ ಹಾಕಿಸಿದನು. ”

ಈ ವಿಷಯವು ಮತ್ತು ಇನ್ನು ಮುಂದಿನ ಸಂಗತಿಗಳು ಸಿಂಗಿರಾಜ ಪುರಾಣದಲ್ಲಿ ಮಾತ್ರ ಪ್ರಸ್ತಾಪಿಸಿಯೇ ಇಲ್ಲ. ಏಕೆಂದರೆ, ಅದರಲ್ಲಿ ೬೪ ಪವಾಡಗಳು ಮಾತ್ರ ವಿವರಿಸಲ್ಪಟ್ಟಿವೆ. ಬಸವಪುರಾಣದ ೬೦ ನೆಯ ಸಂಧಿಯಲ್ಲಾದರೋ ಹರಳಯ್ಯ ಮಧುವಯ್ಯಗಳು ಗುರುಲಿಂಗಸೇವಾನಿಷ್ಠರಾಗಿದ್ದುದನ್ನು ಬಿಜ್ಜಳರಾಜನುನೋಡಿ ಅದು ಸರಿಯಲ್ಲವೆಂದು ನಿಷ್ಕಾರಣವಾಗಿ ಅವರ ಕಣ್ಣುಗಳನ್ನು ಕೀಳಿಸಿ ಕೊಲ್ಲಿಸಿದನೆಂದು ಹೇಳಿದೆ. ಬಿಜ್ಜಳರಾಜನು ಅಂತಹ ಭಯಂಕರವಾದ ಶಿಕ್ಷೆಯನ್ನು ವಿಧಿಸಬೇಕಾದರೆ ಅಂಥ ಮಹತ್ತರವಾದ ಕಾರ್ಯವೇನಾದರೂ ಹರಳಯ್ಯ ಮಧುವಯ್ಯಗಳಿಂದ ಜರುಗಿರಬೇಕಲ್ಲವೇ ? ವೀರಶೈವರಾಗಿದ್ದ ಮಾತ್ರದಿಂದಲೇ ಅಂತಹ ಶಿಕ್ಷೆಯನ್ನು ವಿಧಿಸಿದ್ದರೆ ಅಸಂಖ್ಯಜನಗಳಿಗೆ ಆ ಪ್ರಕಾರ ಹಿಂಸೆಯನ್ನುಂಟು ಮಾಡಬೇಕಾಗಿ

ದ್ದಿತು ಏಕೆಂದರೆ ಮಾಬಾಗ ಜನ್ನಯ್ಯನವರೇ ಮೊದಲಾದವರು ವೀರಶೈವ ರಾಗಿಯೇ ಇದ್ದರು. ಆದಕಾರಣ ಶರಣಲೀಲಾಮೃತದಲ್ಲಿ ಬರೆದಿರುವಂತೆ ಅವರೀರ್ವರಿಗೂ ಶರೀರಸಂಬಂಧ ನಡೆದುದೇ ನಿಜವೆಂದು ಸಿದ್ಧವಾಗುತ್ತದೆ. ಇಷ್ಟೇ ಅಲ್ಲ, ಆ ಪ್ರಕಾರದ ವಿವಾದಗಳೂ ವಿಚಾರಣೆಗಳೂ ನಡೆದಿರಲಿಕ್ಕೇ ಬೇಕು. ಏಕೇದರೆ, ಈ ವಿವಾಹವು ಕೇವಲ ಬಸವಣ್ಣನವರ ಮತ್ತು ಬಿಜ್ಜಳರಾಜನ ಜೀವಿತಚರಿತ್ರೆಗಳಿಗೆ ಮಾತ್ರವೇ ಸಂಬಂಧಪಟ್ಟಿದ್ದಿತೆಂದು ಹೇಳಲಿಕ್ಕಾಗುವುದಿಲ್ಲ. ಕರ್ಣಾಟಕದೇಶದಲ್ಲಿಯೂ ಅದೊಂದು ಅಭೂತಪೂರ್ವದ ವಿಷಯವಾಗಿದ್ದಿತು. ಅದರ ನಿರ್ಣಯದಮೇಲೆಯೇ ಬಸವಣ್ಣನವರ ಮುಂದಣಕಾರ್ಯವು ಮತ್ತು ಅನ್ಯಮತಗಳ ಉನ್ನತಾವನತಿಗಳು ಬಹುಮಟ್ಟಿಗೆ ಅವಲಂಬಿಸಿದ್ದವು. ಇಂತಹ ಮಹತ್ತರವಾದ ಆ ವಿವಾಹದ ವಿಚಾರಣೆಯು ಆ ಕಾಲದಲ್ಲಿ ಎಷ್ಟು ಚರ್ಚೆಯಾಸ್ಪದವಾದುದಾಗಿರಬಹುದೆಂಬುದನ್ನು ಹೇಳಬೇಕಾದುದೇ ಇಲ್ಲ. ರಾಜನು ಕಡೆಗೆ ಅನ್ಯಾಯವಾದ ನಿರ್ಣಯವನ್ನು ಮಾಡಿ ಆ ತೇಜಸ್ವಿಗಳಾದ ಉಭಯ ಶರಣರನ್ನೂ ಭಯಂಕರವಾದ ರೀತಿಯಿಂದ ಕೊಲ್ಲಿಸಿದನು.

ಈ ಶರಣರ ಕೊಲೆಯನಂತರ ಬಸವಣ್ಣನವರು ಜಗದೇವನೆಂಬ ಶರಣನಿಗೆ ಬಿಜ್ಜಳರಾಜನನ್ನು ಕೊಲ್ಲೆಂದುಹೇಳಿ ತಾವು ಸಂಗಮಕ್ಕೆ ಹೋದರೆಂದು ಬಸವಪುರಾಣಾದಿ ಗ್ರಂಥಗಳಲ್ಲಿ ಹೇಳಿದೆ. ಧರಣಿಪಂಡಿತನು ಹೇಳುವುದೇನೆಂದರೆ—"ಜೈನ ಪೂಜಾರಿಯ ವೇಷಧಾರಿಯಾದ ಒಬ್ಬ ಜಂಗಮನ ಸಂಗಡ ಬಸವನು ವಿಷದ ಮಾವಿನ ಹಣ್ಣನ್ನು ಬಿಜ್ಜಳರಾಜನ ಕಡೆಗೆ ಕಳುಹಿಸಲು ರಾಜನು ಅದನ್ನು ಮೂಸಿನೋಡಿ ಮರಣಹೊಂದಿದನು." ಅಂತು ಈ ಉಭಯಾಭಿಪ್ರಾಯಗಳ ಮೇಲಿಂದಲೂ ಬಸವಣ್ಣನವರೇ ಬಿಜ್ಜಳರಾಜನನ್ನು ಕೊಲ್ಲಿಸಿದರೆಂದು ವ್ಯಕ್ತವಾಗುತ್ತದೆ. ಆದರೆ ಇದು ನಿಜವಾದ ಸಂಗತಿಯಲ್ಲ. ಏಕೆಂದರೆ, ಬಸವಣ್ಣನವರು ಬಿಜ್ಜಳರಾಜನನ್ನು ಜಗದೇವನಿಂದ ಕೊಲ್ಲಿಸಲು ಹೇಳಲ್ಪಟ್ಟಿರುವ ಕಾರಣವೇ ಸಮಂಜಸವಾದುದಾಗಿಲ್ಲ. ಜಗ

ದೇವನು ಭವಿಗಳಾದ ದ್ವಿಜರನ್ನು ಮನೆಗೆ ಕರೆದುಕೊಂಡು ಬಂದು ಪಂಗ್ತಿ ಭೋಜನಮಾಡಿದ ಅಪರಾಧಕ್ಕೆ ಬಿಜ್ಜಳರಾಜನನ್ನು ಕೊಲ್ಲುವುದು ಪ್ರಾಯಶ್ಚಿತ್ತವಂತೆ! ಭವಿಗಳಸಂಗಡ ಊಟಮಾಡಿದ ಅಪರಾಧವು ಶಿವದ್ರೋಹಿಯನ್ನು ಶಿಕ್ಷಿಸುವುದರಿಂದ ನಿವಾರಣೆಯಾಗುತ್ತದೆಂದು ಯಾವ ಪ್ರಾಯಶ್ಚಿತ್ತ ವಿಧಿಯಲ್ಲಿ ಹೇಳಿದೆ? ಈ ಅಶಾಸ್ತ್ರೀಯವಾದ ವಿಧಿಯನ್ನು ಬಸವಣ್ಣನವರು ಹೇಳಿದರೆಂದು ನಂಬುವುದು ಸಾಧ್ಯವೇ?

ಇದಲ್ಲದೆ ಶಿವದ್ರೋಹಿಯನ್ನು ದಂಡಿಸುವುದೇ ಗಣಾಚಾರವಾಗಿರುವುದರಿಂದ ಆ ಶಿವಶರಣರನ್ನು ಕೊಲ್ಲಿಸಿದ ಬಿಜ್ಜಳರಾಜನನ್ನು ಕೊಲ್ಲಿಸಿದುದೇ ಬಸವಣ್ಣನವರ ವಿಹಿತವಾದ ಧರ್ಮಾಚರಣೆಯೆಂತಲೂ ಕೆಲವರು ಹೇಳುವುದುಂಟು. ಈ ಪ್ರತಿಪಾದನೆಯೂ ಉಚಿತವಾದುದಲ್ಲ. ಏಕೆಂದರೆ, ಶಿವದ್ರೋಹಿಯನ್ನು ಈ ಪ್ರಕಾರ ಕೊಲ್ಲಲೇಬೇಕೆಂದು ನಿಯಮವಿಲ್ಲ.

ಶಿವನಿಂದಾಕರಂದೃಷ್ಟ್ವಾ ಘಾತಯೇದಥವಾಶಪೇತ್ ।
ಸ್ಥಾನಂವಾತತ್ಪರಿತ್ಯಜ್ಯ ಗಚ್ಛೇದ್ಯದ್ಯಕ್ಷಮೋಭವೇತ್ ॥ (ಪ. ೯. ೩೮.)

ಎಂದು ಸಿದ್ಧಾಂತಶಿಖಾಮಣಿಯಲ್ಲಿ ಸ್ಪಷ್ಟವಾಗಿ ಹೇಳಿದೆ. ಆದುದರಿಂದಲೇ ಜಗದೇವಮಲ್ಲಯ್ಯಗಳು ಬಿಜ್ಜಳನನ್ನು ಕೊಂದರು. ಹರಳಯ್ಯ ಮಾದಿರಾಜಯ್ಯಗಳು ಬಿಜ್ಜಳರಾಜನನ್ನು ಶಪಿಸಿದರು. ಬಸವಣ್ಣನವರು ಆ ಸ್ಥಾನವನ್ನೇ ಬಿಟ್ಟುಹೋದರು. ಶಿವದ್ರೋಹಿಯ ವಿಷಯದಲ್ಲಿ ಆಚರಿಸಬೇಕಾದ ಆಚರಣೆಯು ಅವರವರ ಕ್ರಿಯಾಜ್ಞಾನಗಳ ವ್ಯತ್ಯಾಸದ ಪ್ರಕಾರ ಈ ಪ್ರಕಾರ ಬೇರೆಬೇರೆಯಾಗಿ ಪರಿಣಮಿಸುವುದು ಸ್ವಾಭಾವಿಕವಾಗಿಯೇ ಇದೆ. ಆದಕಾರಣ ಗಣಾಚಾರದಂತೆಯೇ ಬಸವಣ್ಣನವರು ಆಚರಿಸಿದರೆಂಬುದನ್ನು ಸಿದ್ಧಗೊಳಿಸುವುದಕ್ಕಾಗಿ ಬಿಜ್ಜಳರಾಜನನ್ನು ಕೊಲ್ಲಿಸಿದುದು ನಿಜವೆಂದು ಮಿಥ್ಯಾರೋಪಣೆ ಮಾಡಬೇಕಾದುದಿಲ್ಲ. ಶಿವನಿಂದೆಯನ್ನು ಕೇಳಿದಾತನು ಆ ನಿಂದಕನನ್ನು ತಾನು ಕೊಲ್ಲಬೇಕೆಂದು ಹೇಳದೆಯೇ ವಿನಾ ಕೊಲ್ಲಿಸಬೇಕೆಂದು ಹೇಳಲಿಲ್ಲ. ಬಸವಣ್ಣನವರೇ ಬಿಜ್ಜಳರಾಜನನ್ನು ಕೊಂದಿದ್ದರೆ

ಗಣಾಚಾರದಂತೆ ಆಚರಿಸಿದರೆಂದಾದರೂ ಹೇಳಬಹುದಾಗಿತ್ತು. ತಾವು ಯಾರಾಗಿ ಅನ್ಯರಿಂದ ಕೊಲ್ಲಿಸಬೇಕೆಂದು ಗಣಾಚಾರವು ಹೇಳುವುದಿಲ್ಲ. ಆದಕಾರಣ ಈ ಗಣಾಚಾರದ ಆಧಾರದಮೇಲಿಂದಲೂ ಬಸವಣ್ಣನವರು ಬಿಜ್ಜಳರಾಜನನ್ನು ಕೊಲ್ಲಿಸಿದರೆಂದು ಹೇಳಲಿಕ್ಕಾಗುವುದಿಲ್ಲ.

ಆ ಮಹಾನುಭಾವರಾದ ಬಸವಣ್ಣನವರು ಬಿಜ್ಜಳರಾಜನನ್ನು ಕೊಲ್ಲಿಸಲಿಲ್ಲ. ಇಷ್ಟೇ ಅಲ್ಲ; ಆತನನ್ನು ಕೊಲ್ಲಿಸಬಾರದೆಂದೇ ಅವರ ಅಭಿಪ್ರಾಯವಿದ್ದಿತೆಂದು ಹೇಳಬಹುದು. ಬಿಜ್ಜಳರಾಜನನ್ನು ಕೊಲ್ಲುವುದೇ ಅವರಿಗೆ ಯುಕ್ತವಾಗಿ ತೋರಿದ್ದರೆ ತಾವು ಆ ಪ್ರಕಾರ ಮೊದಲೇ ಆ ಪಟ್ಟಣವನ್ನು ಬಿಟ್ಟು ಹೋಗುತ್ತಿರಲಿಲ್ಲ. ಆವರೆಗೂ ಹೇಗೆ ಎಲ್ಲಾ ಕಾರ್ಯಗಳಿಗೆ ಮುಂದಾಳುಗಳಾಗಿಯೇ ಇದ್ದರೋ ಹಾಗೆಯೇ ಈ ಕಾರ್ಯದಲ್ಲಿಯೂ ಮುಖಂಡರಾಗಿಯೇ ಇರುತ್ತಿರಲಿಲ್ಲವೇ? ಅಂತಹಾ ಮಹತ್ತರವಾದ ಪ್ರಸಂಗದಲ್ಲಿ ತಮ್ಮ ಅನುಯಾಯಿಗಳನ್ನು ಯಾವತಾನೆ ಬಿಟ್ಟುಹೋಗುವರು? ಆದುದರಿಂದ ಬಿಜ್ಜಳರಾಜನನ್ನು ಕೊಲ್ಲುವ ವಿಷಯದಲ್ಲಿ ಶರಣ ಸಮೂಹಕ್ಕೂ ಇವರಿಗೂ ಭಿನ್ನಾಭಿಪ್ರಾಯವುಂಟಾಗಿ ಇನ್ನು ಹಿಂಸಾಮಯವಾಗುವ ಈ ಪಟ್ಟಣದಲ್ಲಿ ತಾವು ಇರಬಾರದೆಂದು ಯೋಚಿಸಿ ಮುಂಚಿತವಾಗಿಯೇ ಹೊರಟುಹೋದರೆಂದು ತಿಳಿಯುವುದೇ ವಿಹಿತವಾಗಿದೆ. ಈ ಕೆಳಗಿನ ಆಧಾರಗಳಮೇಲಿಂದ ಈ ಪ್ರಕಾರ ಭಾವಿಸುವದೇ ಯುಕ್ತವೆಂದು ಸ್ಪಷ್ಟವಾಗುತ್ತದೆ.

ಬಿಜ್ಜಳರಾಜನು ಬಸವಣ್ಣನವರಿಂದ ಮುದ್ರೆಯುಂಗರವನ್ನು ತೆಗೆದುಕೊಂಡು ಅವರನ್ನು ಮಂತ್ರಿತ್ವದಿಂದ ತೆಗೆದುಹಾಕಿದನಂತರ ನಡೆದ ಸಮಾಚಾರಗಳು ಸಿಂಗಿರಾಜಪುರಾಣದ ೩೧ ನೆಯ ಸಂಧಿಯಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಆಗ ಈ ಸಂಗತಿಯನ್ನು ಪ್ರಮಥರು ಕೇಳಿ ಹೇಳಿದುದೇನೆಂದರೆ—"ನಿಮಿಷಮಾತ್ರದಲ್ಲಿ ಈ ಚಂಡಾಲನನ್ನು (ಬಿಜ್ಜಳರಾಜನನ್ನು) ಧ್ವಂಸಮಾಡಿ ಮಾಡತಕ್ಕ ಕಾರ್ಯವನ್ನೆಲ್ಲಾ ಮಾಡಿಬಿಟ್ಟೇವು. ಏನುಮಾ

ಡೋಣ? ಬಸವಣ್ಣನು ನಮ್ಮಗಳಿಗೆಲ್ಲಾ ಎಲೈ ಸ್ವಾಮಿಗಳಿರಾ? ನಾನು ಜ್ಞಾನರೂಪನಾಗಿ ಅವತರಿಸಿದ್ದೇನೆ. ಈ ಬಿಜ್ಜಳನು ಕ್ರಿಯಾರೂಪವಾಗಿ ಜನಿಸಿರುತ್ತಾನೆ. ಆದಕಾರಣ ಜ್ಞಾನಕ್ರಿಯೆಗಳ ಉಚ್ಚನೀಚತ್ವಗಳು ಸ್ಪಷ್ಟವಾಗಿ ಲೋಕಕ್ಕೆ ತಿಳಿಯುವುದಕ್ಕೋಸ್ಕರ ನಡೆಯತಕ್ಕ ಕಾರ್ಯ ಕಾರಣಂಗಳೆಲ್ಲವೂ ಸಾಂಗವಾಗಿಯೇ ನಡೆಯಬೇಕು. ಆದುದರಿಂದ ನೀವು ಒಂದು ಕಾರ್ಯವನ್ನೂ ಮಾಡಕೂಡದೆಂದು ಆಜ್ಞಾಪಿಸಿರುತ್ತಾನೆ. ಆದುದರಿಂದ ಸುಮ್ಮನಿರಬೇಕಾಗಿದೆ.” ಇದರಮೇಲಿಂದ ಬಸವಣ್ಣನವರು ಬಿಜ್ಜಳರಾಜನಿಂದಾಗುತ್ತಿದ್ದ ತೊಂದರೆಗಳನ್ನು ಸೈರಿಸಿಕೊಳ್ಳಿರೆಂದೇ ಶರಣರಿಗೆ ಹೇಳುತ್ತಿದ್ದರೆಂದು ಸ್ಪಷ್ಟವಾಗುವುದಿಲ್ಲವೇ?

> ಆನೆ ಅಂಕುಶಕ್ಕಲ್ಲದೆ ಅಂಜುವದೆ ಅಯ್ಯ? ಮಾಣವೆ ಸಿಂಹದ ನಖವೆಂದಂಜುವುದಲ್ಲದೆ? ಆನೀಬಿಜ್ಜಳಂಗಂಜುವನೇ ಅಯ್ಯ ಕೂಡಲಸಂಗಮದೇವಾ! ನೀನು ಸರ್ವಜೀವ ದಯಾಪರನಾದಕಾರಣ ನಿಮಗಂಜುವೆನಲ್ಲದೆ.

ಈ ಪ್ರಕಾರ ಬಸವಣ್ಣನವರೇ ಸ್ಪಷ್ಟವಾಗಿ ಹೇಳಿರುವುದನ್ನು ನೋಡಿದರೆ ಇಂತಹ ದಯಾಸಿಧಿಗಳು ಆ ಬಿಜ್ಜಳರಾಜನನ್ನು ಕೊಲ್ಲಿಸಿದರೆಂಬುದು ಶುದ್ಧ ಸುಳ್ಳುಸಂಗತಿಯೆಂದೇ ಸಿದ್ಧವಾಗುವುದಿಲ್ಲವೇ? ಚೆನ್ನಬಸವಪುರಾಣ (ಕ್ರಿ. ಶ. ೧೫೮೪) ದ ೫ ನೆಯ ಕಾಂಡದ ೯ ನೆಯ ಅಧ್ಯಾಯದಲ್ಲಿ ಚೆನ್ನಬಸವಣ್ಣನವರು ಹೇಳಿದ ಕಾಲಜ್ಞಾನವು ವಿವರಿಸಲ್ಪಟ್ಟಿದೆ. ಅದರಲ್ಲಿರುವುದೇನೆಂದರೆ—“ನಾವು (ಚೆನ್ನಬಸವಣ್ಣನವರು) ಕಲ್ಯಾಣವನ್ನು ಬಿಟ್ಟುಹೋಗುತ್ತಿರಲು ಆಳಿಯಬಿಜ್ಜಳನು ದಂಡನ್ನು ಕಟ್ಟಿಕೊಂಡು ಒಂದು ನಮ್ಮನ್ನು ಬಳಸಿ ಅಡ್ಡಕಟ್ಟುವನು. ಮಡಿವಳಯ್ಯಗಳೇ ಮೊದಲಾದ ಶಿವಶರಣರಿಗೂ ಅವನ ಸೇನೆಗೂ ಯುದ್ಧವಾಗುವುದು. ಆಗ ನಾಗಾಂಬಿಕೆಯು (ಅಕ್ಕನಾಗಮ್ಮನವರು) ಮನಸ್ಸಿನಲ್ಲಿ ಮರುಗಿ ಶಿವಶರಣರು ಇಂತಹ ಕೊಲೆಗೊಡಂಬಡುವರೇ? ಬಸವಣ್ಣನವರು ಹೋದನಂತರ ನೀನು ಆ ಪಟ್ಟಕ್ಕೆ

ಬಂದು ಮೂರುವರೆ ತಿಂಗಳಾಯಿತು. ಅಷ್ಟರಲ್ಲಿ ಬಿಜ್ಜಳರಾಜನನ್ನು ಕೊಂದ ಶಿವಶರಣರು ಕೈಲಾಸಕ್ಕೆ ಹೋಗಲು ಶಿವನು ಚೆನ್ನಾಯಿತು, ಶಿವ ಭಕ್ತರಾದ ನೀವು ಬಿಜ್ಜಳರಾಜನನ್ನು ಕೊಂದುದರಿಂದ ನೀವು ಭೂ ಮಿಯಲ್ಲಿ ಜನಿಸಿ ಶೂಲವನ್ನೇರಿ ಬನ್ನಿರೆಂದು ಹೇಳಲು ಅವರು ಓರುಗ ಲ್ಲೆಂಬ ಪಟ್ಟಣದಲ್ಲಿ ವೀರಗುಂಡ ಬ್ರಹ್ಮರೆಂಬ ಹೆಸರಿನಿಂದ ಹುಟ್ಟಿ ತಮ್ಮ ಮೊರೆಹೊಕ್ಕ ಕಳ್ಳರನ್ನು ರಾಜಭಟರ ಕಡೆಗೆ ಕೊಡದೆ ಕೊನೆಗೆ ತಾವೇ ಶೂಲ ವನ್ನೇರಿ ಮುಕ್ತರಾಗುವರು. ಆವಕಾರಣ ಶಿವಭಕ್ತರು ಇಂತಹ ಹಿಂ ಸಾಕಾರ್ಯವನ್ನು ಮನಸ್ಸಿನಲ್ಲಿಯೂ ಕೂಡಾ ಯೋಚಿಸಬಾರದೆಂದು ಬೋಧಿಸುವಳು."

ಇದರಮೇಲಿಂದ ಅಕ್ಕನಾಗಮ್ಮನವರು ಬಿಜ್ಜಳರಾಜನನ್ನು ಕೊಲ್ಲ ಲು ಒಪ್ಪಿರಲಿಲ್ಲವೆಂತಲೂ, ಇಷ್ಟೇ ಅಲ್ಲ ; ಶಿವಶರಣರಿಗೆ ಈ ಹಿಂಸಾಕಾ ರ್ಯವು ಅಯುಕ್ತವಾದುದೆಂದು ಹೇಳಿದರೆಂತಲೂ ಸಿದ್ಧವಾಗುವುದಿಲ್ಲವೇ ? ಇವರೇ ಈ ಪ್ರಕಾರ ಹೇಳಿರುವಾಗ ಬಸವಣ್ಣನವರು ಮಾವಿನಹಣ್ಣಿನಿಂದ ಬಿಜ್ಜಳರಾಜನನ್ನು ಕೊಲ್ಲಿಸಿದರೆಂದು ಧರಣಿಪಂಡಿತನು ಹೇಳಿರುವುದು ಶುದ್ಧ ಅಸಂಗತವಾದುದೆಂದು ಹೇಳಬೇಕಾದುದೇಇಲ್ಲ.

ಬಿಜ್ಜಳರಾಜನು ಕೊಲ್ಲಲ್ಪಟ್ಟವಿಷಯದಲ್ಲಿ ಹೇಗೆ ಭಿನ್ನಾಭಿಪ್ರಾಯಗ ಳಿವೆಯೋ ಹಾಗೆಯೇ ಬಸವಣ್ಣನವರ ಐಕ್ಯದವಿಷಯದಲ್ಲಿಯೂ ಮ ತಭೇದಗಳಿವೆ. ಈ ವಿಷಯವಾಗಿ ಬಸವಪುರಾಣದ ೬೦ನೆಯ ಸಂಧಿ ಯಲ್ಲಿ ಹೇಳಿರುವುದೇನೆಂದರೆ:— ಬಸವಣ್ಣನು ಕಲ್ಯಾಣದಿಂದ ಕಪ್ಪಡಿಕ್ಷೇ ತ್ರಕ್ಕೆ ಹೋಗಿ ಸಂಗಮನಾಥನ ಆಲಯವನ್ನು ಪ್ರವೇಶಿಸಿ ಸಂಗಮೇಶನನ್ನು ಸ್ತುತಿಸಲು ಮೊದಲು ಗುರುರೂಪವನ್ನು ಧರಿಸಿಬಂದದ್ದಂತೆಯೇ ಸಂಗಮ ನಾಥನು ಆಗಲೂ ಪ್ರತ್ಯಕ್ಷನಾದನು. ಬಸವನು ಆತನನ್ನು ನೋಡಿ ಆನಂದ ಬಾಷ್ಪಗಳನ್ನು ಸುರಿಸುತ್ತಾ ನಮಸ್ಕಾರವನ್ನು ಮಾಡಿದನು. ಗುರುಮೂ ರ್ತಿಯು ತನ್ನ ಮುದ್ದು ಮಗನಾಗಿದ್ದ ಬಸವನನ್ನು ತಬ್ಬಿಕೊಂಡು

ಆತನಿಗೆ ತನ್ನ ಪ್ರಸಾದವನ್ನು ಕೊಟ್ಟು ಬಹು ವಾತ್ಸಲ್ಯದಿಂದ ಕೈ ಹಿಡಿದು ಗರ್ಭಗುಡಿಯೊಳಗೆ ಕರೆದುಕೊಂಡು ಹೋದನು. ಅನಂತರ ಈರ್ವರೂ ಕಣ್ಣಿಗೆ ಕಾಣಿಸಲಿಲ್ಲ. ಕೂಡಲೇ ಪರಮಾಶ್ಚರ್ಯವಾಯಿತು. ಬೆಳಕಿನಲ್ಲಿ ಬೆಳಕು ಬೆರೆದಂತಾಯಿತು. ”

ಧರಣಿಪಂಡಿತನು ಹೇಳುವುದೇನೆಂದರೆ:— ಬಸವನು ವಿಷದಮಾವಿನ ಹಣ್ಣಿನಿಂದ ಬಿಜ್ಜಳನನ್ನು ಕೊಲ್ಲಿಸಿದನಂತರ ಹೆದರಿ ಓಡಿಹೋಗಿ ಕಡತಡಿಯ ವೃಷಭಪುರದಲ್ಲಿಯ ಒಂದು ಭಾವಿಯಲ್ಲಿ ಮುಳುಗಿ ಸತ್ತನು. ಉಳಿವೆನೆಂದು ಹೊಕ್ಕು ಸತ್ತದ್ದರಿಂದ ಆ ಊರಿಗೆ ಉಳಿವೆ ಎಂದು ಹೆಸರಾಯಿತು. ”

ಶ್ರೀಯುತ ದೇಶಪಾಂಡೆಯವರು ಧರಣಿಪಂಡಿತನ ಈ ಅಭಿಪ್ರಾಯವೇ ನಿಜವೆಂಬು ನಂಬಿ ಆ ಉಳವಿಯು ಉತ್ತರ ಕಾನಡಾಜಿಲ್ಲೆಯ ಸೂಪಾತಾಲೂಕಿನಲ್ಲಿರುವುದೆಂತಲೂ, ಅಲ್ಲಿ ಬಸವನಗುಡಿ, ಚಿಲಯಿಕುಣಿ, ಅಕ್ಕನಾಗವ್ವನಗುಡಿ, ಮೊದಲಾದವುಗಳಿದ್ದು ಪ್ರತಿವರ್ಷ ಮಾಘಶುದ್ಧ ಪೌರ್ಣಿಮೆಯದಿವಸ ಅಲ್ಲಿ ದೊಡ್ಡರಥೋತ್ಸವವಾಗುವುದರಿಂದ ಆ ಕಾಲಕ್ಕೆ ಸಾವಿರಾರು ಲಿಂಗಾಯತರು ತಮ್ಮ ತಮ್ಮ ಹೆಂಡರು ಮಕ್ಕಳೊಡನೆ ಬಹು ಭಕ್ತಿಯಿಂದ ಹೋಗುತ್ತಾರೆಂತಲೂ, ವಿವರಿಸಿ ಧರಣಿಪಂಡಿತನ ಅಭಿಪ್ರಾಯವನ್ನೇ ದೃಢೀಕರಿಸಲು ಪ್ರಯತ್ನಿಸಿದ್ದಾರೆ.

ಶ್ರೀಯುತ ದೇಶಪಾಂಡೆಯವರು ಬರೆದಿರುವಪ್ರಕಾರ ವೀರಶೈವರು ಉಳವಿಗ ಹೋಗುತ್ತಿರುವುದೇನೋನಿಜ. ಆದರೆ ಅದು ಬಸವಣ್ಣನವರು ಐಕ್ಯವಾದ ಸ್ಥಾನವೆಂದು ಹೋಗುವುದಿಲ್ಲ. **ಬಸವಣ್ಣನವರಿಗೂ ಉಳವಿಗೂ ಯಾವಸಂಬಂಧವೂ ಇಲ್ಲ.** ಶ್ರೀ ಚೆನ್ನಬಸವಣ್ಣನವರು ಶರಣಸಮೂಹದೊಡನೆ ಬಂದು ಅಲ್ಲಿ ಮಹಾಮನೆಗವಿಯನ್ನು ಪ್ರವೇಶಿಸಿದರೆಂದೇ ವೀರಶೈವರು ಅಲ್ಲಿಗೆ ಹೋಗುತ್ತಿದ್ದಾರೆ. ಆ ರಥೋತ್ಸವದಲ್ಲಿ ನಡೆಯತಕ್ಕ ಕಾರ್ಯಗಳನ್ನು ಮತ್ತು ವೀರಶೈವರು ಅಲ್ಲಿಗೆ ಏಕೆ ಹೋಗುತ್ತಿರುವರೆಂಬ ಸಮಾಚಾರವನ್ನು ತಿಳಿದುಕೊಳ್ಳಲು ಸ್ವಲ್ಪ ಪ್ರಯತ್ನ ಪಟ್ಟಿದ್ದರೆ ದೇಶಪಾಂ

ಡೆಯುವರು ಈ ಪ್ರಕಾರ ಬಸವಣ್ಣನವರಿಗೂ ಉಳವಿಗೂ ಸಂಬಂಧವನ್ನು ಬೆಳೆಸುತ್ತಿರಲಿಲ್ಲ. ಬಿಜ್ಜಳರಾಜನು ಕೊಲ್ಲಲ್ಪಟ್ಟನಂತರ ಅಳಿಯ ಬಿಜ್ಜಳನು (ರಾಯಮುರಾರಿಯು) ಚೆನ್ನಬಸವಣ್ಣನವರ ಮೇಲೆ ದಂಡೆತ್ತಿ ಹೋಗಿದ್ದಾನೆಯೇವಿನಾ ಬಸವಣ್ಣನವರಮೇಲಲ್ಲ. ಏಕೆಂದರೆ, ಬಸವಣ್ಣನವರು ಬಿಜ್ಜಳನು ಕೊಲ್ಲಲ್ಪಡುವ ಪೂರ್ವದಲ್ಲಿಯೇ ಕಲ್ಯಾಣಪಟ್ಟಣವನ್ನು ಬಿಟ್ಟು ಹೋಗಿದ್ದಾರೆಂದು ಈ ಮುಂಚೆಯೇ ದೃಢೀಕರಿಸಲ್ಪಟ್ಟಿದೆಯಷ್ಟೆ. ಮಲ್ಲಿಕಾರ್ಜುನಪಂಡಿತಾರಾಧ್ಯರು ಬಸವಣ್ಣನವರ ವಿಷಯದಲ್ಲಿ ಬಹು ಭಕ್ತಿಯುಳ್ಳವರಾಗಿದ್ದರು. ಇವರು ಬಸವಣ್ಣನವರನ್ನು ನೋಡಬೇಕೆಂದು ಹೊರಟು ಹಾನುಗಲ್ಲಿಗೆಬಂದಾಗ ದಾರಿಯಲ್ಲಿ ಒಬ್ಬ ಚರನು ಬಂದು "ಬಸವಂ ಕೂಡಲ ಸಂಗಮೇಶ್ವರನಲ್ಲಿ ಅಡಗಿದಂ. ಬಿಜ್ಜಳನಂ ಶರಣರು ಕೊಂದರು." ಎಂದು ಹೇಳಲು ಬಸವ ಬಯಲಾದೆಯಾ ಎಂದು ಆ ಪಂಡಿತಾರಾಧ್ಯರು ಅಳಲಿಗೀತವನ್ನು ಹಾಡಿದರೆಂದು ಪಂಡಿತಾರಾಧ್ಯ ಚರಿತ್ರೆಯಲ್ಲಿ ಸ್ಪಷ್ಟವಾಗಿಬರೆದಿದೆ. ಇದರಮೇಲಿಂದಲೂ ಬಿಜ್ಜಳನು ಕೊಲ್ಲಲ್ಪಡುವ ಪೂರ್ವದಲ್ಲಿಯೇ ಬಸವಣ್ಣನವರು ಸಂಗಮನಾಥಕ್ಕೆ ಹೋಗಿದ್ದರೆಂದೇ ಗೊತ್ತಾಗುತ್ತದೆ. ಆದಕಾರಣ ಧರಣಿಪಂಡಿತನ ಅಭಿಪ್ರಾಯವನ್ನಾಗಲಿ ಅಥವಾ ಅದನ್ನು ಪುಷ್ಟೀಕರಿಸಲು ದೇಶಪಾಂಡೆಯವರು ಮಾಡಿರುವ ತರ್ಕವನ್ನಾಗಲಿ ನಂಬಲಿಕ್ಕಾಗುವುದಿಲ್ಲ. ತಿಬೇಟದೇಶದಲ್ಲಿರುವ "ಶಂಕರಕಟಾಹ" ಎಂಬ ಸ್ಥಳದವಿಷಯವಾಗಿ ಅಲ್ಲಿಯ ಬೌದ್ಧಮತದ ಲಾಮಾಗುರುಗಳು ಹೇಳುವುದೇನೆಂದರೆ :—"ಶಂಕರಾಚಾರ್ಯರು ಈ ಸ್ಥಳದಲ್ಲಿ ಪರಾಭವಹೊಂದಿ ತಾವು ತೆಗೆದುಕೊಂಡು ಬಂದಿದ್ದ ಕಡಾಯದಲ್ಲಿ ದೇಹತ್ಯಾಗ ಮಾಡಿಕೊಂಡದ್ದರಿಂದ ಇದಕ್ಕೆ ಶಂಕರಕಟಾಹವೆಂದು ಹೇಳುತ್ತಿದ್ದಾರೆ !" ಮತದ್ವೇಷದಿಂದ ಈ ಪ್ರಕಾರ ಬಸವಣ್ಣನವರ ವಿಷಯದಲ್ಲಿಯೂ, ಧರಣಿಪಂಡಿತನು ಸ್ಥಳಸಂಬಂಧವನ್ನು ಜೋಡಿಸಿರುವುದೇನಾಶ್ಚರ್ಯ ?

ಸಂಗಮೇಶಲಿಂಗದಲ್ಲಿ ಬಸವಣ್ಣನವರು ಐಕ್ಯವಾದುದನ್ನಾದರೂ ನಂಬುವುದು ಸಾಧ್ಯವೇ ? ಎಂದು ಅನೇಕರು ಯೋಚಿಸಬಹುದು. ಆದರೆ ಆ ವಿಷಯವಾಗಿ ಬಸವಪುರಾಣಾದಿ ಗ್ರಂಥಗಳಲ್ಲಿ ವಿವರಿಸಿರುವ ಸಂದರ್ಭಗಳನ್ನು ನೋಡಿದರೆ ಆ ಮಹಾನುಭಾವರ ಐಕ್ಯದ ರಹಸ್ಯವು ವ್ಯಕ್ತವಾಗುತ್ತದೆ. ಜಾತವೇದಿಮುನಿಗಳಿಗೂ ಸಂಗಮೇಶನೆಂದು ಹೇಳುತ್ತಿದ್ದರೆಂಬಂಶವು ಈ ಮುಂಚೆಯೇ ವಿವರವಾಗಿ ಸ್ಪಷ್ಟೀಕರಿಸಲ್ಪಟ್ಟಿದೆಯಷ್ಟೆ. ಸಂಗಮೇಶನ ಮೊದಲು ಗುರುರೂಪವನ್ನು ಧರಿಸಿ ಬಂದಂತೆಯೇ ಈಗಲೂ ಗುರುಮೂರ್ತಿಯಾಗಿ ಬಂದನೆಂತಲೂ, ಅಪ್ಪಿಕೊಂಡನೆಂತಲೂ, ಕೈಹಿಡಿದು ಕರೆದುಕೊಂಡು ಹೋದನೆಂತಲೂ, ಬಸವಪುರಾಣದಲ್ಲಿ ಹೇಳಿರುವುದರಿಂದ ಆ ಜಾತವೇದಿಮುನಿಗಳೇ ಆಗಮಿಸಿ ತಮ್ಮ ಪ್ರಿಯಶಿಷ್ಯನನ್ನು ಕರೆದುಕೊಂಡು ಹೋದರೆಂದು ಸ್ಪಷ್ಟವಾಗುವುದಿಲ್ಲವೇ ? ಈ ವಿಷಯವಾಗಿ ಷಡುಷಷ್ಠಿಪುರಾತನರ ಪುರಾಣದ ೨ನೆಯ ಪ್ರಕರಣದಲ್ಲಿ ಹೇಳಿರುವುದೇನೆಂದರೆ— " ಬಸವಣ್ಣನವರು ಕಪ್ಪಡಿಯ ಸಂಗಮೇಶ್ವರನಿಗೆ ಸಾಷ್ಟಾಂಗವೆರಗಿ ಗವಿಯಬಾಗಿಲಮುಂದೆನಿಂತು ಸಂಗಮೇಶನನ್ನು ಸ್ತುತಿಸಲು ಗವಿಗೆಹೊಂದಿಸಿದ ಶಿಲೆಯು ಕಡೆಗಾಗಲು ಗವಿಯ ಕವಾಟವನ್ನು ತೆಗೆದು ಮಾರ್ಗವನ್ನೈದಿದನು. " ಈ ಪ್ರಕಾರ ಗುರುಶಿಷ್ಯರು ಗವಿಯಲ್ಲಿ ಪ್ರವೇಶಿಸಿದ್ದರಿಂದಲೇ ಈರ್ವರೂ ಕಣ್ಣಿಗೆ ಕಾಣಿಸಲಿಲ್ಲವೆಂದು ಬಸವಪುರಾಣದಲ್ಲಿ ಬರೆದಿದೆ.

ಈ ವರೆಗಿನ ವಿವರಣೆಗಳ ಮೇಲಿಂದ ಮಹಾತ್ಮಗಾಂಧಿಯವರು ಹಿಂದುಸ್ಥಾನವು ಹಿಂಸಾಮಾರ್ಗವನ್ನನುಸರಿಸಿದರೆ ತಾವು ಹಿಮಾಲಯವನ್ನು ಸೇರುತ್ತೇವೆಂದು ಹೇಗೆ ಹೇಳುತ್ತಿದ್ದಾರೆಯೋ ಹಾಗೆಯೇ ಆ ಮಹಾನುಭಾವರಾದ ಬಸವಣ್ಣನವರು ಕೂಡಾ ತಮ್ಮ ಶರಣ ಸಮೂಹಕ್ಕೆ ಬಿಜ್ಜಳರಾಜನನ್ನು ಕೊಲ್ಲುವ ಹಿಂಸಾಮಾರ್ಗವನ್ನು ನೀವು ಅನುಸರಿಸಿದರೆ ನಾವು ಈ ಸ್ಥಳವನ್ನೇಬಿಟ್ಟು ಸಂಗಮನಾಥನನ್ನು ಸೇರುತ್ತೇವೆಂದು ಹೇಳಿ ಸಂಗ

ಮಕ್ಕೆ ಬಂದು ತಮ್ಮ ಗುರುವರ್ಯರಾದ ಆ ಜಾತವೇದಿಮುನಿಗಳ ಸನ್ನಿಧಿಯನ್ನು ಸೇರಿದರೆಂದು ಸ್ಪಷ್ಟವಾಗುವುದಿಲ್ಲವೇ ? ಆ ವರೆಗೂ ಜಾತವೇದಿಮುನಿಗಳು ಜೀವಿಸಿರಬಹುದೇ ? ಎಂಬ ಸಂದೇಹವುಂಟಾಗಲೂ ಅವಕಾಶವಿಲ್ಲ. ಏಕೆಂದರೆ, ಆಗ ಬಸವಣ್ಣನವರಿಗೆ ಸಾಧಾರಣ ೩೬ ವರ್ಷಗಳಾಗಿದ್ದವು. ಇವರ ಜನನಕಾಲದಲ್ಲಿ ಜಾತವೇದಿಮುನಿಗಳಿಗೆ ೩೦-೪೦ ವರ್ಷಗಳಾಗಿದ್ದವೆಂದು ತಿಳಿದರುಕೂಡಾ ಆ ಮಹಾತಪಸ್ವಿಗಳು ೭೦-೮೦ ವರ್ಷ ಜೀವಿಸಿದ್ದರೆಂದು ತಿಳಿಯಲು ಅಭ್ಯಂತರವೇನು ?

ಈ ಪ್ರಕಾರ ಈ ಮಹಾನುಭಾವರು ತಮ್ಮ ೩೬ನೆಯ ವರ್ಷದೊಳಗಾಗಿ ಕೇವಲ ಹತ್ತು ವರ್ಷಗಳಲ್ಲಿಯೇ ಅಭೂತ ಪೂರ್ವವಾದ ಧಾರ್ಮಿಕ ಕ್ರಾಂತಿಯನ್ನುಂಟುಮಾಡಿ ಲಕ್ಷಾಂತರ ಜನಗಳನ್ನು ಉದ್ಧಾರ ಮಾಡಿದರು. ಇವರಿಗೆ ಬಾಲಸಂಗನೆಂಬ ಒಬ್ಬ ಮಗನಿದ್ದನೆಂದು ಹಿಂದೆಯೇ ಹೇಳಿದೆಯಷ್ಟೆ. ಈತನು ಇವರ ಪೂರ್ವದಲ್ಲಿಯೇ ಶಿವೈಕ್ಯನಾಗಿದ್ದನೆಂದು ತೋರುತ್ತದೆ. ಏಕೆಂದರೆ, ಪುಷ್ಪವಿದ್ದಂತೆ ಮೊಗ್ಗಿಯನರ್ಪಿಸಿಕೊಂಡ ಶಿವನು. ಪಕ್ವವಾದ ಫಳವಿದ್ದಂತೆ ಕಸುಗಾಯ ಕೊಯ್ದ ಶಿವನು. ಎಂಬುದಾಗಿ ಬಸವಣ್ಣನವರು ಹೇಳಿದ್ದಾರೆ. ಮತೋದ್ಧಾರಕ್ಕೋಸ್ಕರ ಇವರು ಏರ್ಪಡಿಸಿದ್ದ ಶೂನ್ಯಸಿಂಹಾಸನವು ಈ ವರೆಗೂ ವೀರಶೈವ ಮತದೇಳಿಗೆಗೆ ಒಂದು ಮಹತ್ತರವಾದ ಗುರುಪೀಠವಾಗಿಯೇ ಇದೆ. ಈ ಮಹಾನುಭಾವರು ಬೋಧಿಸಿರುವ ವಿಷಯಗಳು ಷಟ್‌ಸ್ಥಳವಚನ, ಕಾಲಜ್ಞಾನವಚನ, ಮಂತ್ರಗೋಪ್ಯ ಎಂಬ ಗ್ರಂಥಗಳಲ್ಲಿವೆ. ಇವರ ವಚನಗಳಿಗೆ ಕೊನೆಯಲ್ಲಿ "ಕೂಡಲಸಂಗಮದೇವಾ" ಎಂಬ ಮುದ್ರಿಕೆ ಯಿರುತ್ತದೆ.

# ಉಪಸಂಹಾರ.

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರ ವೆಂಬ ಬತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳ ಗುತಿರ್ದುದಯ್ಯ ಶಿವನಪ್ರಕಾಶ. ಆ ಬೆಳಗಿನೊಳಗೊಪ್ಪುತಿರ್ದರ್ಮೈಯ್ಯ ಅಸಂಖ್ಯಾತರು, ಹುಸಿಯೇ ? ಭಕ್ತನಿರ್ದಕ್ಷೇತ್ರವೇ ಮುಕ್ತಿಕ್ಷೇತ್ರ ವೆಂಬುದು ಹುಸಿಯೇ ? ಭಕ್ತನಿರ್ದಪೇಶವು ಪಾವನವೆಂಬುದು ಪುಸಿ ಯೇ ? ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯಸಂಗನ ಬಸವಣ್ಣನ ಕಂಡು ಬದುಕಿದೆ ಕಾಣಾ ಸಿದ್ಧರಾಮಯ್ಯ. *

ಮಹಾನುಭಾವರಾದ ಬಸವಣ್ಣನವರು ತಮ್ಮ ಅಸಾಧಾರಣವಾದ ಭಕ್ತಿಪ್ರಭಾವದಿಂದ ವೀರಶೈವ ಮತವನ್ನು ಅತ್ಯಧಿಕ ಪ್ರಸಾರಗೊಳಿಸಿ ಕರ್ನಾಟಕದಲ್ಲಿ ನೂತನ ಚೈತನ್ಯವನ್ನುಂಟುಮಾಡಿದರೆಂಬುದು ಈವರೆಗೆ ವಿವರಿಸಲ್ಪಟ್ಟ ಆ ಮಹಾತ್ಮರ ಪವಿತ್ರ ಚರಿತ್ರೆಯ ಮೇಲಿಂದ ವಾಚಕರಿಗೆ ವೇದ್ಯವಾಗಿರಬಹುದು. ಈ ಪರಮಪೂಜ್ಯರ ಪೂರ್ವದಲ್ಲಿಯೂ ಕರ್ನಾಟ ಕದಲ್ಲಿ ಅನೇಕ ಮಹಾನುಭಾವರು ವೀರಶೈವಮತವನ್ನು ಎಷ್ಟೋ ಪ್ರಸಾರ ಗೊಳಿಸಿದ್ದರು. ಚಾಲುಕ್ಯರ ಮೂರನೆಯ ಜಯಸಿಂಹನ ಕಾಲದಲ್ಲಿ (ಕ್ರಿ. ಶ. ೧೦೧೮-೧೦೪೪.) ದೇವರ ದಾಸಿಮಯ್ಯನವರು ಆ ಮಹಾರಾಜನ ಪತ್ನಿಯಾ ಗಿದ್ದ ಸುಗ್ಗಲದೇವಿಗೆ ವೀರಶೈವ ಮತದೀಕ್ಷೆಯನ್ನು ಮಾಡಿದ್ದರಲ್ಲದೆ ಆ ಕಾಲದಲ್ಲಿ ರಾಜಧಾನಿಯಾಗಿದ್ದ ಹೋಟಲಕೆರಿ (ಪೋಟಲಕೆರೆ) ಯಲ್ಲಿಯೇ ಆ ಮಹಾ ಶಿವಶರಣರು ೨೦ ಸಹಸ್ರ ಜೈನರಿಗೆ ವೀರಶೈವಮತ ದೀಕ್ಷೆಯನ್ನು ಕೊಟ್ಟಿದ್ದರೆಂದು ಬಸವಪುರಾಣದಿಂದ ಗೊತ್ತಾಗುತ್ತದೆ. ಅದೇಕಾಲದಲ್ಲಿದ್ದ ಶಂಕರದಾಸಿಮಯ್ಯರೆಂಬ ಮಹಾ ಶಿವಶರಣರಿಂದಲೂ ಈ ಮತವು ಎಷ್ಟೋ

---

* ಪ್ರಭುಲಿಂಗಲೀಲೆಯ ೧೪ ನೆಯ ಗತಿ.

ಪ್ರಸಾರವಾಯಿತು. ಈ ಪ್ರಕಾರ ಕರ್ನಾಟಕದಲ್ಲಿ ವೀರಶೈವಮತವು ಹಿಂದಕ್ಕೆ ಪ್ರಸಾರವಾಗಿದ್ದರೂ ಅನ್ಯಮತಗಳ ಪ್ರಾಬಲ್ಯದಿಂದ ಬಸವಣ್ಣನವರ ಕಾಲದಲ್ಲಿ ಈ ಮತೀಯರು ಕರ್ನಾಟಕದಲ್ಲಿ ಬಹು ವಿರಳವಾಗಿದ್ದರು. ಅಂತಹ ಸಮಯದಲ್ಲಿ ಈ ಮಹಾನುಭಾವರು ಕರ್ನಾಟಕದ ಮುಖ್ಯಪಟ್ಟಣವಾಗಿದ್ದ ಕಲ್ಯಾಣದಲ್ಲಿ ವೀರಶೈವಮತವನ್ನು ಪ್ರಸಾರಗೊಳಿಸಲುಪಕ್ರಮಿಸಿದೊಡನೆ ಅಲ್ಲಲ್ಲಿ ವಾಸವಾಗಿದ್ದ ಶ್ರೀ ಪ್ರಭುದೇವರು, ಶ್ರೀ ಮಡಿವಳ ಮಾಚಿದೇವರು, ಶ್ರೀ ಅಕ್ಕಮಹಾದೇವಿಯವರು ಮೊದಲಾದ ಮಹಾ ಮಹಾ ಶಿವಶರಣರೂ, ಶಿವಶರಣೆಯರೂ ಕಲ್ಯಾಣಕ್ಕೆ ಬಂದು ತಮ್ಮ ತಮ್ಮ ಭಕ್ತಿ ಜ್ಞಾನ ವೈರಾಗ್ಯಗಳ ಅದ್ಭುತಶಕ್ತಿಯಿಂದ ಅತ್ಯಲ್ಪ ಕಾಲದಲ್ಲಿಯೇ ವೀರಶೈವಮತವನ್ನು ಕರ್ನಾಟಕದಲ್ಲಿ ವಿಶೇಷವಾಗಿ ಪ್ರಸಾರಗೊಳಿಸಿದರು.

ಈಗ ಭರತಖಂಡದಲ್ಲಿ ವೀರಶೈವರ ಸಂಖ್ಯೆಯು ಸಾಧಾರಣ ೩೫ ಲಕ್ಷ ಇದೆಯೆಂದು ತಿಳಿಯಲ್ಪಡುತ್ತಿದ್ದರೂ ಇವರ ಮುಕ್ಕಾಲು ಪಾಲಿಗಿಂತ ಹೆಚ್ಚು ಸಂಖ್ಯೆಯು ಕರ್ನಾಟಕದೇಶದಲ್ಲಿಯೇ ಇದೆ. ಇದರಲ್ಲಿಯೂ ವಿಜಾಪುರ, ಧಾರವಾಡ, ಬೆಳಗಾಂವ ಈ ಮೂರು ಜಿಲ್ಹೆಗಳಲ್ಲಂತೂ ಅಲ್ಲಿನ ಹಿಂದುಗಳ ಸಂಖ್ಯೆಗೆ ನೂರಕ್ಕೆ ೩೫ ರಷ್ಟು ವೀರಶೈವರ ಸಂಖ್ಯೆಯಿದೆ. ಈ ಪ್ರಕಾರ ಇಲ್ಲಿ ಈ ಮತವು ಪ್ರಬಲತರವಾಗಿರುವುದಕ್ಕೆ ಬಸವಣ್ಣನವರ ಅವತಾರಕೃತ್ಯವು ಈ ಕರ್ನಾಟಕದಲ್ಲಾದುದೇ ಮುಖ್ಯಕಾರಣವೆಂದು ಧಾರಾಳವಾಗಿ ಹೇಳಬಹುದು. ಹೀಗಿದ್ದರೂ ಶ್ರೀಯುತ ಮಲ್ಲಿಕಾರ್ಜುನ ಮಲಕಪ್ಪ ಕಲ್ಯಾಣಶೆಟ್ಟಿ ಬಿ. ಎ. ಇವರು "ವೀರಶೈವರ ಸ್ಥಿತಿ" ಎಂಬ ತಮ್ಮ ಮರಾಠಿ ಪುಸ್ತಕದ ೧೦ ನೆಯ ಪುಟದಲ್ಲಿ "ಬಸವೇಶ್ವರನು ವೀರಶೈವಮತ ಸಂಬಂಧವಾಗಿ ಯತ್ಕಿಂಚಿತ ಕಾರ್ಯವನ್ನು ಕೂಡಾ ಮಾಡಲಿಲ್ಲ." ಎಂದು ಹೇಳಿರುವುದು ಅತ್ಯಂತ ಅಯುಕ್ತವಾದುದಲ್ಲವೇ ?

"ವೀರಶೈವಮತವು ಬಸವೇಶ್ವರನಗಿಂತ ಪೂರ್ವದಲ್ಲಿಯೇ ಕರ್ನಾಟಕದಲ್ಲಿ ದೇವರದಾಸಿಮಯ್ಯ ಶಂಕರದಾಸಿಮಯ್ಯ ಮೊದಲಾದವರಿಂದ ಪ್ರಸಾ

ರವಾಗಿದ್ದಿತೆಂತಲೂ, ಈಗ ಕ್ರೈಸ್ತ ಪಾದ್ರಿಗಳು ಮತಪ್ರಸಾರದ ಒಂದೇ ಒಂದು ಕಾರ್ಯವನ್ನು ನಾನಾ ಭಾಗಗಳಲ್ಲಿ ಸಂಚರಿಸಿ ಮಾಡುತ್ತಿದ್ದರೂ ಅವರ ಮತವು ಪ್ರಸಾರವಾಗದಿರುವಾಗ ದೇಶಸಂಚಾರಕ್ಕೆ ಅನುಕೂಲವಿಲ್ಲದಿದ್ದ ಆ ಕಾಲದಲ್ಲಿ ೫-೬ ವರ್ಷಮಾತ್ರ ರಾಜಕಾರ್ಯದಲ್ಲಿದ್ದ ಬಸವೇಶ್ವರನಿಂದ ವೀರಶೈವಮತಪ್ರಸಾರವಾದುದು ಅಸಂಭವನೀಯವಾದುದೆಂತಲೂ" ಶ್ರೀಯುತ ಕಲ್ಯಾಣಶೆಟ್ಟರು ತರ್ಕಿಸಿರುವುದು ಶುದ್ಧ ಅಸಂಗತವಾದುದೆಂಬಂಶವು ಈ ಮುಂಚೆ ೫-೬ ನೆಯ ಪ್ರಕರಣಗಳಲ್ಲಿ ವಿವರಿಸಿದುವ ಸಂಗತಿಗಳಿಂದ ವಾಚಕರಿಗೆ ಸ್ಪಷ್ಟವಾಗದಿರಲಾರದು.

ಈಗಿರುವ ಲಕ್ಷಾಂತರ ವೀರಶೈವರೆಲ್ಲಾ ಬಸವಣ್ಣನವರ ಹತ್ತುವರ್ಷಗಳ ಕಾಲದಲ್ಲಿಯೇ ಉಂಟಾದವರೆಂದು ಯಾರೂ ಹೇಳಲಾರರು. ಆದರೆ ಇವರಲ್ಲಿ ಬಸವಣ್ಣನವರ ನಂತರದವರೇ ಅತ್ಯಧಿಕವೆಂಬುದು ಮಾತ್ರ ನಿರ್ವಿವಾದವಾದ ಸಂಗತಿಯಾಗಿದೆ. ಕಳೆದ ಏಳುನೂರು ವರ್ಷಗಳಿಂದಲೂ ದೇಶದ ಜನಸಂಖ್ಯೆಯು ಹೆಚ್ಚುತ್ತಾ ಬಂದಂತೆ ವೀರಶೈವರ ಸಂಖ್ಯೆಯೂ ಹೆಚ್ಚಾಗಿರುವುದು ಸ್ವಾಭಾವಿಕವು. ಅಲ್ಲದೆ ಬಸವಣ್ಣನವರನಂತರ ಈ ವರೆಗೂ ವೀರಶೈವಮತೋದ್ಧಾರಕರನೇಕರು ಆಗಾಗ್ಗೆ ಅನ್ಯಮತೀಯರಿಗೆ ವೀರಶೈವದೀಕ್ಷೆಯನ್ನು ಮಾಡುತ್ತಲೇ ಬಂದಿದ್ದಾರೆ. ಶೂನ್ಯಸಿಂಹಾಸನದ ನಾಲ್ಕನೆಯ ಮಹಾಸ್ವಾಮಿಗಳವರಾದ ಜಗದ್ಗುರು ಶ್ರೀ ಸಿದ್ಧವೀರಸ್ವಾಮಿಗಳವರು ಹನ್ನೆರಡುಸಹಸ್ರ ಜನಗಳಿಗೆ ಲಿಂಗಧಾರಣ ದೀಕ್ಷೆಯನ್ನು ಮಾಡಿದರೆಂದು ಪಟ್ಟವಲ್ಲರಿಯಮೇಲಿಂದ ಗೊತ್ತಾಗುತ್ತದೆ. ಈ ಪ್ರಕಾರ ದಿನೇ ದಿನೇ ವೀರಶೈವಮತಾನುಯಾಯಿಗಳು ಹೆಚ್ಚುತ್ತಾ ಈಗ ಈ ಸಮಾಜವು ಇಷ್ಟು ಘನವಾದುದಾಗಿದೆ.

ವೀರಶೈವಸಮಾಜಕ್ಕೆ ಈಗಿನ ಗಾಂಭೀರ್ಯಸ್ವರೂಪವು ಪ್ರಾಪ್ತವಾಗಲು ಆ ಮಹಾನುಭಾವರಾದ ಬಸವಣ್ಣನವರೇ ಮುಖ್ಯಕಾರಣರಾದರೆಂಬುದು ನಿಷ್ಪಕ್ಷಪಾತಿಗಳಿಗೆ ವೇದ್ಯವಾಗದಿರಲಾರದು. ಬಸವಣ್ಣನವರಿಂ

ದಾದಷ್ಟು ಮತಪ್ರಸಾರವು ಇನ್ನಾರಿಂದಲೂ ಆಗದಿರುವುದರಿಂದಲೇ ವೀರಶೈವರಿಗೆ ಈ ಮಹಾನುಭಾವರು ಇಷ್ಟು ಪರಿಚಯದವರೂ, ಪೂಜ್ಯರೂ, ಆಗಿದ್ದಾರೆ. ಶ್ರೀಯುತ ಕಲ್ಯಾಣಶೆಟ್ಟರು ಯೋಚಿಸುವಂತೆ ಇವರಿಂದ ವೀರಶೈವಮತಕ್ಕೆ ಸ್ವಲ್ಪವಾದರೂ ಸಹಾಯವಾಗದೆ ಇದ್ದಿದ್ದರೆ ಕಳೆದ ಏಳುನೂರು ವರ್ಷಗಳಿಂದಲೂ ಈ ಮಹಾನುಭಾವರ ವಿಷಯದಲ್ಲಿ ವೀರಶೈವಸಮಾಜಕ್ಕೆ ಇಷ್ಟು ದೃಢತರವಾದ ಪೂಜ್ಯಬುದ್ಧಿಯೂ, ಸ್ಮರಣೆಯೂ, ಇರುತ್ತಲೇ ಇರಲಿಲ್ಲ.

ಬಸವಣ್ಣನವರು ನಾನಾ ಕೀಳುಕುಲದವರನ್ನೆಲ್ಲಾ ವೀರಶೈವಮತದಲ್ಲಿ ತೆಗೆದುಕೊಳ್ಳಬಾರದಾಗಿದ್ದಿತೆಂತಲೂ, ಶ್ರೀ ಶಂಕರಾಚಾರ್ಯ, ಶ್ರೀಮಧ್ವಾಚಾರ್ಯ, ಮೊದಲಾದ ಶೈವವೈಷ್ಣವ ಮತಾಚಾರ್ಯರಂತೆ ಉತ್ತಮವರ್ಣದವರನ್ನೇ ತೆಗೆದುಕೊಂಡು ಚಾತುರ್ವರ್ಣ್ಯಗಳು ರಕ್ಷಿಸಲ್ಪಡುವಂತೆಯೇ ಮತಪ್ರಸಾರವನ್ನು ಮಾಡಬೇಕಾಗಿದ್ದಿತೆಂತಲೂ, ಹಾಗೆ ಮಾಡಿದ್ದರೆ ತ್ರಿಮತೀಯರಂತೆಯೇ ವೀರಶೈವರೂ ಈಗ ಶ್ರೇಷ್ಠಸ್ಥಿತಿಯಲ್ಲಿಯೇ ಇರುತ್ತಿದ್ದರೆಂತಲೂ, ಮತ್ತು ವೀರಶೈವಸಮಾಜದಲ್ಲಿರುವ ಈಗಿನ ನಾನಾ ಒಳಭೇದಗಳ ಕಲಹವು ಇರುತ್ತಿರಲಿಲ್ಲವೆಂತಲೂ, ಅನೇಕರು ಹೇಳುತ್ತಿದ್ದಾರೆ. ಈ ವಿಧವಾದ ಆಕ್ಷೇಪಣೆಯು ಬಸವಣ್ಣನವರ ಮೇಲೆ ಈಗಲೇ ಉಂಟಾಗಿದೆಯೆಂದಲ್ಲ. ಅವರು ಮತಪ್ರಸಾರ ಮಾಡುತ್ತಿದ್ದಾಗಲೂ ಈ ಆಕ್ಷೇಪಗಳಿದ್ದುವು. ಅವುಗಳಿಗೆ ಅವರು ಕೊಟ್ಟಿರುವ ಉತ್ತರಗಳು ಹಿಂದಣ ನೆಯ ಪ್ರಕರಣದಲ್ಲಿಯೂ, ಮುಂದೆ ವಿವರಿಸಿರುವ ಅವರ ದಿವ್ಯತರವಾದ ಬೋಧೆಯಲ್ಲಿಯೂ, ಸ್ಪಷ್ಟವಾಗಿಯೇ ಇರುವುದರಿಂದ ಇಲ್ಲಿ ವಿವರಿಸಿ ಹೇಳಬೇಕಾದುದಿಲ್ಲ. ಮೊದಲನೆಯ ಪ್ರಕರಣದಲ್ಲಿ ಉದಾಹರಿಸಿರುವ ಪಾರಮೇಶ್ವರಾಗಮ ಮತ್ತು ಸೂಕ್ಷ್ಮಾಗಮಗಳ ಉಕ್ತಿಗಳಮೇಲಿಂದ ಶಿವಭಕ್ತಿಯುಳ್ಳವರು ಅವರು ಯಾವ ಕುಲದವರಾಗಿದ್ದರೂ ಅವರಿಗೆ ವೀರಶೈವದೀಕ್ಷೆಯನ್ನು ಮಾಡಬಹುದೆಂಬುದು ಸ್ಪಷ್ಟವಾಗುತ್ತದಷ್ಟೆ. ಹೀಗಿರುವಾಗ ಬಸವಣ್ಣನ

ವರು ಅಶಾಸ್ತ್ರೀಯವಾದ ಪದ್ಧತಿಯನ್ನೇನೂ ಉಂಟುಮಾಡಲಿಲ್ಲವೆಂಬುದು ಸಿದ್ಧವಾಗುವುದಿಲ್ಲವೇ ?

ವರ್ಣವು ಜನ್ಮದಿಂದಲೋ ಅಥವಾ ಗುಣದಿಂದಲೋ ಎಂಬ ವಾದವು ಈಗಾಗಲಿ ಅಥವಾ ಬಸವಣ್ಣನವರ ಕಾಲದಲ್ಲಾಗಲಿ ಉಂಟಾದುದಲ್ಲ. ಹಿಂದಕ್ಕೆ ವಶಿಷ್ಠ ವಿಶ್ವಾಮಿತ್ರರ ಕಾಲದಲ್ಲಿಯೇ ಉಂಟಾಗಿದೆ. ಸರ್ವಶ್ರೇಷ್ಠವಾದ ವೈದಿಕಧರ್ಮವು ಅತಿ ಪ್ರಾಚೀನಕಾಲದಲ್ಲಿಯೇ ಈ ವಾದವನ್ನು ನಿರ್ಣಯಿಸಿ ಯಾವ ಗುಣವಿಶಿಷ್ಟವಾದ ವರ್ಣಕಲ್ಪನೆಯನ್ನೇ ಬೋಧಿಸಿರುವುದೋ ಆ ಉತ್ತಮವಾದ ಪದ್ಧತಿಯನ್ನೇ ಮಹಾತ್ಮರಾದ ಬಸವಣ್ಣನವರೂ ಅನುಸರಿಸಿ ವೀರಶೈವಮತದ ಈ ಶ್ರೇಷ್ಠತತ್ವವನ್ನು ಜೀರ್ಣೋದ್ಧಾರಮಾಡಿದರೇವಿನಾ ಅವೈದಿಕಮಾರ್ಗವನ್ನನುಸರಿಸಿ ಜನ್ಮವಿಶಿಷ್ಟವಾದ ವರ್ಣಕಲ್ಪನೆಯನ್ನು ನೆಲೆಗೊಳಿಸಲಿಲ್ಲ. ಶ್ರೀ ಶಂಕರಾಚಾರ್ಯರೇ ಮೊದಲಾದವರು ಬಸವಣ್ಣನವರಂತೆ ಮಾಡದೆ ಇದ್ದುದು ಅವರ ದೋಷವೇವಿನಾ ಶ್ರೀ ಬಸವಣ್ಣನವರು ಮಾಡಿದುದೇನೂ ಇವರ ದೋಷವಲ್ಲ. ಇಷ್ಟೇ ಅಲ್ಲ; ಈ ಮಹಾನುಭಾವರು ಮಾಡಿರುವ ಮಹತ್ಕಾರ್ಯಗಳಲ್ಲಿ ಜನ್ಮವಿಶಿಷ್ಟವರ್ಣಕಲ್ಪನೆಯನ್ನು ತೆಗೆದುಹಾಕಿರುವುದೇ ಅತ್ಯಧಿಕವಾದುದಾಗಿದೆ. ವೈದಿಕಧರ್ಮಗ್ರಂಥಗಳಲ್ಲಿ ಅತ್ಯಂತ ಪ್ರಾಮುಖ್ಯವಾದುದಾಗಿರುವ ಶ್ರೀಮದ್ಭಗವದ್ಗೀತೆಯಲ್ಲಿಯೂ ಗುಣವಿಶಿಷ್ಟವಾದ ವರ್ಣಕಲ್ಪನೆಯನ್ನೇ ಪ್ರತಿಪಾದಿಸಿಲ್ಲವೇ ?

ಚಾತುರ್ವರ್ಣ್ಯಂಮಯಾಸೃಷ್ಟಂ ಗುಣಕರ್ಮವಿಭಾಗಶಃ || ಅ. ೪, ೧೩.

"ಚಾತುರ್ವರ್ಣಗಳು ಗುಣಕರ್ಮಗಳ ಮೇಲಿಂದ ನನ್ನಿಂದಲೇ ಉಂಟುಮಾಡಲ್ಪಟ್ಟವು.

ಬ್ರಾಹ್ಮಣಕ್ಷತ್ರಿಯ ವಿಶಾಂ ಶೂದ್ರಾಣಾಂಚಪರಂತಪ |
ಕರ್ಮಾಣಿಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ || ಅ. ೧೮, ೪೧.

"ಪರಂತಪ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಇವರುಗಳ ಸ್ವಭಾವಸಿದ್ಧವಾದ ಗುಣಗಳ ಮೇಲಿಂದಲೇ ಅವರ ಕರ್ಮಗಳು ಕೂಡಾ ಬೇರೆಬೇರೆಯಾಗಿವೆ."

ಮಹಾತತ್ವಜ್ಞಾನಿಗಳಾಗಿದ್ದ ಕೀರ್ತಿಶೇಷ ಬಾಳಗಂಗಾಧರ ಟಿಳಕರವರು ಶ್ರೇಷ್ಠತರವಾದ ತಮ್ಮ ಗೀತಾರಹಸ್ಯಗ್ರಂಥದ ೮೪೩ ನೆಯ ಪುಟದಲ್ಲಿ ಈ ವಿಷಯವಾಗಿ ಹೇಳಿರುವುದೇನೆಂದರೆ—

"ಸ್ವಭಾವಜನ್ಯಗುಣ ಭೇದದಿಂದಲೇ ಚಾತುರ್ವರ್ಣ ವ್ಯವಸ್ಥೆಯು ಏರ್ಪಟ್ಟಿತೆಂಬಂಶವು ಭಗವದ್ಗೀತೆಯಲ್ಲಿ ಮಾತ್ರವೇ ಹೇಳಲ್ಪಟ್ಟಿದೆಯೆಂದಲ್ಲ. ಮಹಾಭಾರತದ ವನಪರ್ವದಲ್ಲಿ ನಹುಷ ಯುಧಿಷ್ಠಿರ ಮತ್ತು ದ್ವಿಜವ್ಯಾಧರ ಸಂವಾದಗಳಲ್ಲಿಯು (ವನ. ೧೮೦ ಮತ್ತು ೨೧೧), ಶಾಂತಿಪರ್ವದಲ್ಲಿನ ಭೃಗು ಭರದ್ವಾಜ ಸಂವಾದದಲ್ಲಿಯು (ಶಾ. ೦. ೧೮೮), ಅನುಶಾಸನ ಪರ್ವದಲ್ಲಿನ ಉಮಾಮಹೇಶ್ವರ ಸಂವಾದದಲ್ಲಿಯು (ಅನು. ೧೪೩), ಮತ್ತು ಅಶ್ವಮೇಧ ಪರ್ವದಲ್ಲಿನ ಅನುಗೀತೆಯಲ್ಲಿಯು (ಅನು. ೩೯, ೧೧), ಈ ಗುಣ ಭೇದದ ತತ್ವವೇ ಸ್ವಲ್ಪ ವ್ಯತ್ಯಸ್ತ ವಾಗಿ ಹೇಳಲ್ಪಟ್ಟಿದೆ."

ಈ ಪ್ರಕಾರ ಗುಣವಿಶಿಷ್ಟವಾದ ವರ್ಣವ್ಯವಸ್ಥೆಯು ಲೋಪವಾಗಿ ವರ್ಣಗಳಿಗೆ ಜನ್ಮವೇ ಪ್ರಾಧಾನ್ಯವಾಗಿ ಪರಿಣಮಿಸಿದುದರಿಂದ ಜನಾಂಗವು ಅಧೋಗತಿಗೀಡಾಗುತ್ತಿದ್ದುದನ್ನು ನೋಡಿಯೇ ಈ ಮಹಾನುಭಾವರು ಗುಣಕ್ಕೆ ಪ್ರಾಧಾನ್ಯವನ್ನು ಕೊಟ್ಟು ಕಮಲವು ಕೆಸರಿನಲ್ಲಿ, ರತ್ನವು ಕಲ್ಲಿನಲ್ಲಿ, ಮುತ್ತು ಸಿಂಪೆಯಲ್ಲಿ ಹುಟ್ಟಿದ್ದರೂ ಅವುಗಳ ಜನ್ಮಸ್ಥಳವನ್ನು ಯೋಚಿಸದೆ ಅವುಗಳಲ್ಲಿರುವ ಗುಣಗಳ ಮೇಲಿಂದಲೇ ಹೇಗೆ ಅವು ಗುಣಜ್ಞರಿಂದ ಆದರಿಸಲ್ಪಡುತ್ತಲಿವೆಯೋ ಹಾಗೆಯೇ ಶಿವಭಕ್ತಿ ಜ್ಞಾನ ಸದಾಚಾರಗಳುಳ್ಳವರು ಯಾವ ಕುಲದಲ್ಲಿ ಹುಟ್ಟಿದ್ದರೂ ಗುಣೈಕ ಪಕ್ಷಪಾತಿಗಳಾದ ಬಸವಣ್ಣನವರು ಅವರ ಜನ್ಮಕುಲವನ್ನೆಣಿಸದೆ ಅವರು ಪೂಜ್ಯರೆಂದೇ ಭಾವಿಸಿದರು. ಈ ವಿಚಾರವು ಪ್ರಾಯಶಃ ವಾದಧಮಟ್ಟಿಗೆ ಮಾತ್ರ ಸಕಲರಿಗೂ ಮಾನ್ಯ

ವಾಗುವಂತಿದ್ದರೂ ಅದರಂತೆಯೇ ಆಚರಣೆಯಲ್ಲಿ ತರುವ ಮಹನೀಯರು ಅತ್ಯಂತವಿರಳ. ಆ ಭಗವಾನ್ ಬುದ್ಧದೇವನ ತರುವಾಯ ಈ ಮಹಾನುಭಾವರಾದ ಬಸವಣ್ಣನವರ ವರೆಗೆ ಭಾರತಖಂಡದಲ್ಲಿ ಅವತರಿಸಿದ ಯಾವ ಧರ್ಮೋದ್ಧಾರಕರೂ ಜನಾಂಗದ ಅಭಿವೃದ್ಧಿಗೆ ಆವಶ್ಯಕವಾಗಿರುವ ನ್ಯಾಯವಾದ ಈ ಶ್ರೇಷ್ಠತತ್ವವನ್ನು ಈ ಪ್ರಕಾರ ಜೀರ್ಣೋದ್ಧಾರಮಾಡಲಿಲ್ಲ. ಹಾಗೆ ಮಾಡಿದ್ದರೆ ಈಗ ಆರ್ಯಸಮಾಜದವರು ಶುದ್ಧಿ ಸಭೆಯನ್ನೇರ್ಪಡಿಸಬೇಕಾಗುತ್ತಿರಲಿಲ್ಲ. ಮತ್ತು ಕಳೆದ ಅಗಷ್ಟ್ ತಿಂಗಳಲ್ಲಿ ಕಾಶೀಕ್ಷೇತ್ರದಲ್ಲಿ ಕೂಡಿದ್ದ ಹಿಂದು ಮಹಾಸಭೆಯಲ್ಲಿ ಸನಾತನ ವೈದಿಕ ಧರ್ಮಾಭಿಮಾನಿಗಳಾದ ಮಹಾಮಹೋಪಾಧ್ಯಾಯರು ಕೂಡಿ ಅನ್ಯಧರ್ಮದವರನ್ನು ವೈದಿಕ ಧರ್ಮದಲ್ಲಿ ತೆಗೆದುಕೊಳ್ಳಬೇಕೆಂದು ತೀರ್ಮಾನಿಸುವ ಪ್ರಸಂಗವೂ ಒದಗುತ್ತಿರಲಿಲ್ಲ. ಇಷ್ಟೇ ಅಲ್ಲ; ಹಿಂದುಧರ್ಮದವರಿಗೆ ಈಗಿನ ಧಾರ್ಮಿಕ ಮತ್ತು ಸಾಮಾಜಿಕ ಶೋಚನೀಯಸ್ಥಿತಿಯೂ ಉಂಟಾಗುತ್ತಿರಲಿಲ್ಲ. ವರ್ಣಗಳ ವಿಷಯವಾಗಿ ಬಸವಣ್ಣನವರು ಹೇಳಿರುವುದೇನೆಂದರೆ:—

> ಹೊಲಿಗಂಡದಲಿ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದುವಿನ ವ್ಯವಹಾರ ಒಂದೇ. ಆಶೆಯಾಮಿಷರೋಷ ಹರುಷವಿಷಯಾದಿಗಳೆಲ್ಲ ಒಂದೇ. ಏನನೋದಿ ಏನಕೇಳಿ ಏನುಫಲ? ಕುಲಜನೆಂಬುದಕ್ಕೆ ಆವುದು ದೃಷ್ಟಾಂತ? ಶ್ಲೋ॥ ಸಪ್ತಧಾತುಸಮಂ ಪಿಂಡಂ ಸಮಯೋನಿ ಸಮುದ್ಭವಂ। ಆತ್ಮಜೀವಸಮಾಯುಕ್ತಂ ವರ್ಣಾನಾಂ ಕಿಂಪ್ರಯೋಜನಂ? ॥ ಎಂದುದಾಗಿ, ಕಾಸಿಕಮ್ಮಾರನಾದ, ಬೀಸಿಮಡಿವಾಳನಾದ, ಹಾಸನಿಕ್ಕಿಸಾಲಿಗನಾದ, ವೇದವನೋದಿಹಾರುವನಾದ, ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ? ಇದುಕಾರಣ ಕೂಡಲಸಂಗಮದೇವಾ ಲಿಂಗಸಂಗವನರಿತವನೇ ಕುಲಜನು.

ಬಸವಣ್ಣನವರು ಈ ಪ್ರಕಾರ ಕೇವಲ ನುಡಿದವರಲ್ಲ. ಇದರಂತೆಯೇ ನಡೆದು ತೋರಿಸಿದವರಾಗಿದ್ದಾರೆ. ಅನ್ಯರಿಗೂ ಇವರಿಗೂ ಇರತಕ್ಕ ವೈಶಿಷ್ಟ್ಯವು ಇದೇಸರಿ. ಶ್ರೀ ಬಸವಣ್ಣನವರಿಗಿಂತಲೂ ಬುದ್ಧಿಶಾಲಿಗಳೂ

ತರ್ಕವ್ಯಾಕರಣಾದಿ ಶಾಸ್ತ್ರಜ್ಞರೂ, ಭಾಷ್ಯಕಾರರೂ, ಅನೇಕರು ಆಗಿಹೋದರು. ಆದರೆ ಇವರಂತೆ ನುಡಿಗೆ ಸರಿಯಾಗಿಯೇ ನಡೆದು ತೋರಿಸಿ ಜನಾಂಗದಲ್ಲಿ ಅತ್ಯದ್ಭುತವಾದ ವಿಚಾರಕ್ರಾಂತಿಯನ್ನುಂಟುಮಾಡಿದವರು ಮಾತ್ರ ಬುದ್ಧದೇವನ ತರುವಾಯ ಇವರಿಗೆ ಯಾರೂ ಜನ್ಮವೆತ್ತಿರಲಿಲ್ಲ. ಬಸವಣ್ಣನವರ ಕಾಲಕ್ಕೆ ಕಲ್ಯಾಣದಲ್ಲಿದ್ದ ಶಿವನಾಗಮಯ್ಯನವರೆಂಬ ಒಬ್ಬ ಮಹಾ ಶಿವಯೋಗಿಗಳು ಜನ್ಮದಿಂದ ಅಂತ್ಯಜರಾಗಿದ್ದರೂ ಬಸವಣ್ಣನವರು ತಾವು ಜನ್ಮದಿಂದ ಬ್ರಾಹ್ಮಣರೆಂದು ಆ ಮಹಾನುಭಾವರನ್ನು ಉಪೇಕ್ಷಿಸದೆ ಆ ಪರಮ ಪೂಜ್ಯರ ಪಾದೋದಕ ಪ್ರಸಾದಗಳನ್ನು ಸೇವಿಸುತ್ತಿದ್ದರು. ಇಂತಹ ಗುಣೈಕ ಪಕ್ಷಪಾತಿಗಳು ಜಗತ್ತಿನಲ್ಲಿ ಅತ್ಯಂತ ವಿರಳವಲ್ಲವೇ?

ಗುಣಪ್ರಾಮುಖ್ಯತೆಯನ್ನು ಹೇಗೆ ಎಲ್ಲರೂ ಒಪ್ಪಿಕೊಳ್ಳುತ್ತಿದ್ದರೂ ಕುಲಾಭಿಮಾನದಿಂದ ಗುಣಿಗಳನ್ನು ಮಾತ್ರ ಹೆಚ್ಚುಕಡಿಮೆಯಾಗಿ ದೂರೀಕರಿಸುತ್ತಲೇ ಇರುತ್ತಾರಷ್ಟೆ. ಅನ್ಯರು ಮಾತ್ರ ತಮ್ಮ ಗುಣಕ್ಕೆ ಗೌರವವನ್ನು ಕೊಡದಿದ್ದರೆ ಅವರು ಸ್ವಾರ್ಥಿಗಳೂ, ದುರಭಿಮಾನಿಗಳೂ, ಎಂದು ಹೇಗೆ ಸಕಲರೂ ಹೇಳುತ್ತಿರುತ್ತಾರೆಯೋ ಹಾಗೆಯೇ ತಾವುಕೂಡಾ ಅನ್ಯರ ಗುಣವನ್ನು ಅವರ ಕುಲದಕಡೆಗೆ ಲಕ್ಷಿಸಿ ಉಪೇಕ್ಷಿಸುತ್ತಾ ಇರುತ್ತಾರಲ್ಲವೇ? ಈ ಭೇದಬುದ್ಧಿಯು ನುಡಿಮಾತ್ರದಲ್ಲಿ ಹೋಗುವುದೇನೋ ಮುಖ್ಯವಲ್ಲ. ಅದು ನಡೆಯಲ್ಲಿಯೂ ಅಳಿದುಹೋಗಬೇಕು ಆಗ ಅವರೇ ಲೋಕಪೂಜ್ಯರಾಗುತ್ತಾರೆ. ಮಹಾನುಭಾವರಾದ ಬಸವಣ್ಣನವರು ಈ ಭೇದಬುದ್ಧಿಯನ್ನು ತಮ್ಮ ನಡೆಯಲ್ಲಿಯೂ ತೆಗೆದುಹಾಕಿದ್ದರಿಂದಲೇ ಅವರು ಇಷ್ಟು ವಂದ್ಯರಾಗಿದ್ದಾರೆ.

ಪರಮಾತ್ಮನನ್ನು ಸೇರಲು ಎಲ್ಲಾ ಮನುಷ್ಯರಿಗೂ ಅಧಿಕಾರ ಉಂಟೇ ಉಂಟೆಂದು ಸಕಲ ಆಸ್ತಿಕಮತೀಯರೂ ಹೇಳುತ್ತಿದ್ದಾರಷ್ಟೆ. ಇಂತಿಂತಹ ಕುಲದವರುಮಾತ್ರ ಪರಮಾತ್ಮನ ಹತ್ತಿರ ಇಲ್ಲಿಲ್ಲಿಯವರೆಗೇ ಹೋಗಲು ಪಾತ್ರರೆಂದು ವೈದಿಕಧರ್ಮದಲ್ಲಿ ಆ ಮುಕ್ತಿಸ್ಥಾನವು ಕುಲಾನುಗುಣ್ಯವಾಗಿ

ವಿಭಾಗಿಸಲ್ಪಟ್ಟಿಲ್ಲವಷ್ಟೆ. ಭಗವದ್ಗೀತೆಯಲ್ಲಿ ಈ ವಿಷಯವಾಗಿ ಹೇಳಿರುವುದೇನೆಂದರೆ:—

ಮಾಂಹಿಪಾರ್ಥವ್ಯಪಾಶ್ರಿತ್ಯಯೇ ಽ ಪಿಸ್ಯುಃಪಾಪಯೋನಯಃ ।
ಸ್ತ್ರೀಯೋವೈಶ್ಯಾಸ್ತಥಾಶೂದ್ರಾಸ್ತೇ ಽ ಪಿಯಾಂತಿಪರಾಂಗತಿಂ ॥

ಅ. ೯, ೩೨.

" ಪಾರ್ಥ ! ನೀಚಕುಲದಲ್ಲಿ ಹುಟ್ಟಿದವರೇ ಆಗಲಿ, ಸ್ತ್ರೀಯರೇ ಆಗಲಿ, ವೈಶ್ಯರೇ ಆಗಲಿ, ಶೂದ್ರರೇ ಆಗಲಿ, ಅವರು ಕೂಡಾ ನನ್ನನ್ನಾಶ್ರಯಿಸಿದರೆ ಅವರು ಪರಮ ಪದವಿಯನ್ನೇ ಹೊಂದುತ್ತಾರೆ. "

ಈ ಪ್ರಕಾರ ಪರಮಾತ್ಮನನ್ನು ಹೊಂದಲು ಸಕಲಕುಲದವರಿಗೂ, ಸ್ತ್ರೀ ಪುರುಷರಿಗೂ, ಸಮಾನವಾದ ಅಧಿಕಾರವಿರುವಾಗ ಅಂತಹ ಪಾತ್ರತೆಯು ಜನಗಳಲ್ಲುಂಟಾಗಲು ಮುಖ್ಯ ಸಾಧನಗಳಾದ ದೀಕ್ಷೆ ಉಪದೇಶ ಮೊದಲಾದ ಸಂಸ್ಕಾರಗಳು, ಧ್ಯಾನ ಧಾರಣಾದಿಕ್ರಿಯೆಗಳು ಮಾತ್ರ ಕೆಲವರಿಗುಂಟೆಂತಲೂ, ಕೆಲವರಿಗಿಲ್ಲವೆಂತಲೂ ಹೇಳುವುದುಯುಕ್ತವೇ ? ಯಾರು ವಿದ್ವಾಂಸರಾದರೂ ಆಗಬಹುದು. ಆದರೆ ಕೆಲವರುಮಾತ್ರ ವಿದ್ಯಾಲಯದ ಮೆಟ್ಟಿಲನ್ನು ಕೂಡಾ ಹತ್ತಬಾರದೆಂದು ಕಟ್ಟಪ್ಪಣೆಮಾಡಿರುವ ಬೋಧಕರ ಮನಸ್ಸಿನಲ್ಲಿ ಸಕಲರೂ ವಿದ್ವಾಂಸರಾಗಬೇಕೆಂಬ ಉದ್ದೇಶವಿದೆಯೆಂದು ಹೇಳಲಿಕ್ಕಾಗುವುದೇ ? ಬಸವಣ್ಣನವರು ಇಂತಹ ಬೋಧಕರಾಗಿ ಬಂದಿರಲಿಲ್ಲ. ಇವರು ವೀರಶೈವ ಮತೋಪದೇಶದ ವಿಶ್ವವಿದ್ಯಾಲಯವನ್ನು ಸಕಲಕುಲದವರಿಗೂ, ಸ್ತ್ರೀ ಪುರುಷರಿಗೂ ತೆರೆದಿಟ್ಟಿದ್ದರು. ಶಿವಭಕ್ತಿಯೆಂಬ ಪ್ರವೇಶಧನವನ್ನು ಕೊಟ್ಟು ಯಾರಾದರೂ ವಿಶ್ವವಿದ್ಯಾಲಯದಲ್ಲಿ ಪ್ರವೇಶಿಸಿ ಅಲ್ಲಿನ ನಿಯಮಗಳನ್ನನುಸರಿಸುತ್ತಾ ತಮ್ಮ ತಮ್ಮ ಭಕ್ತಿ, ಜ್ಞಾನ, ಕ್ರಿಯೆ ಮತ್ತು ವೈರಾಗ್ಯಗಳ ತಾರತಮ್ಯದಿಂದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯನೆಂಬ ಪದವಿಗಳನ್ನು ಹೊಂದಲು ಸಕಲರಿಗೂ ಅವಕಾಶವನ್ನಿಟ್ಟಿದ್ದರು.

ನೀನು ಇಂತಹ ಕುಲದಲ್ಲಿ ಹುಟ್ಟಿರುವುದರಿಂದ ನಿನ್ನಲ್ಲಿ ಎಷ್ಟೇ ಸದಾಚಾರ ಸದ್ಗುಣಗಳಿದ್ದರೂ ನೀನು ಮುಂದಣ ತರಗತಿಗೆ ಯೋಗ್ಯನಲ್ಲವೆಂತಲೂ ಸಾಯುವವರೆಗೂ ನೀನು ಇದೇ ತರಗತಿಯಲ್ಲಿದ್ದು ಮುಂದಣ ಜನ್ಮದಲ್ಲಿ ಮುಂದಣ ತರಗತಿಗೆ ಬರಬಹುದೆಂತಲೂ, ಬೋಧಿಸುವ ಕೆಲವು ಅನ್ಯಮತೀಯ ಬೋಧಕರಂತೆ ಬಸವಣ್ಣನವರು ತಮ್ಮ ವಿದ್ಯಾಲಯದಲ್ಲಿ ಒಂದು ಜನ್ಮಕ್ಕೆ ಒಂದೇ ತರಗತಿಯನ್ನು ದಾಟುವಂತೆ ವಿದ್ಯಾಭ್ಯಾಸದ ಕ್ರಮವನ್ನು ಗೊತ್ತು ಪಡಿಸಿರಲಿಲ್ಲ. ಈಗ ಲೌಕಿಕ ವಿದ್ಯಾಭ್ಯಾಸಕ್ಕೆ ಹೇಗೆ ಒಂದೇ ಜನ್ಮದಲ್ಲಿ ಎಲ್ಲಾ ತರಗತಿಗಳಿಗೂ ಅವರವರ ಬುದ್ಧಿಶಕ್ತಿಯಪ್ರಕಾರ ಹೋಗಲು ಅವಕಾಶವಿದೆಯೋ ಹಾಗೆಯೇ ಆ ಪಾರಮಾರ್ಥಿಕ ವಿದ್ಯಾಭ್ಯಾಸದ ಎಲ್ಲಾ ತರಗತಿಗಳಲ್ಲಿಯೂ ಒಂದೇ ಜನ್ಮದಲ್ಲಿ ತೇರ್ಗಡೆಯಾಗಲು ಸಕಲರಿಗೂ ಅವಕಾಶವನ್ನಿಟ್ಟಿದ್ದರು. ಇದೇನೋ ಸಂಪೂರ್ಣವರ್ಣನೆಯೇಅಲ್ಲ. ಆಗ ಶಿವಶರಣರ ಅನುಭವ ಮಂಟಪದಲ್ಲಿ ವೀರಶೈವರು ಸೇರುತ್ತಿರುವಾಗ ಮಹಾಜ್ಞಾನಿಗಳಾಗಿದ್ದ ಶ್ರೀ ಚೆನ್ನಬಸವಣ್ಣನವರು ಬಾಗಿಲಲ್ಲಿನಿಂತು ಷಟಸ್ಥಳಗಳ ಸಂಬಂಧವಾಗಿ ಪ್ರಶ್ನೆಮಾಡುತ್ತ ಅವರವರ ಯೋಗ್ಯತಾನುಗುಣವಾದ ಸ್ಥಾನಗಳಲ್ಲಿ ಕೂಡ್ರಿಸುತ್ತಿದ್ದರು.

ಬಸವಣ್ಣನವರು ಈ ಪ್ರಕಾರ ಸಕಲರಿಗೂ ಪಾರಮಾರ್ಥಿಕ ಜ್ಞಾನಾರ್ಜನೆಯ ವಿಷಯದಲ್ಲಿ ಸಮಾನವಾದ ಸ್ವಾತಂತ್ರ್ಯ ಸೌಲಭ್ಯಗಳನ್ನುಂಟುಮಾಡಿ ಕೊಟ್ಟದ್ದರಿಂದ ಅಂತ್ಯಜಾದಿ ಕೀಳು ಕುಲದವರೆಂದು ಯಾರನ್ನು ಅನೇಕರು ಆಕ್ಷೇಪಿಸುತ್ತಿದ್ದರೋ ಮತ್ತು ಆಕ್ಷೇಪಿಸುತ್ತಿದ್ದಾರೆಯೋ ಆ ಮಾದಾರ ಚೆನ್ನಯ್ಯ, ಮೇದಾರ ಕೇತಯ್ಯ, ಡೋಹರ ಕಕ್ಕಯ್ಯ, ಕಿನ್ನರಿ ಬ್ರಹ್ಮಯ್ಯ ಮೊದಲಾದ ಅನೇಕ ಪರಮ ಪೂಜ್ಯರು ಮಹಾ ಮಹಾ ಶಾಸ್ತ್ರಜ್ಞರಿಗಿಂತಲೂ, ಪಂಡಿತರಿಗಿಂತಲೂ, ಜ್ಞಾನದಲ್ಲಿ ಸ್ವಲ್ಪವೂ ಕಡಿಮೆಯಾಗಿರಲಿಲ್ಲವೆಂಬುದಕ್ಕೆ ಆ ಶಿವಶರಣರ ಶ್ರೇಷ್ಠತರವಾದ ವಚನಗಳೇ ದೃಷ್ಟಾಂತಗಳಾಗಿರುವಾಗ ಅವರ ಶ್ರೇಷ್ಠತ್ವವನ್ನು ಸಿದ್ಧಗೊಳಿಸಬೇಕಾದುದೇ ಇಲ್ಲ.

ಸ್ತ್ರೀಯರು ಸಂಸ್ಕಾರಗಳಿಗೆ ಅನರ್ಹರೆಂದು ಅನ್ಯ ಮತೀಯರು ಸ್ತ್ರೀ ಜಾತಿಯನ್ನು ಉಪೇಕ್ಷಿಸಿದ್ದಾರಷ್ಟೆ. ಆದರೆ ವೀರಶೈವ ಮತದ ಪ್ರಕಾರ ಬಸವಣ್ಣನವರು ಸ್ತ್ರೀಯರಿಗೂ ಪುರುಷರಂತೆಯೇ ಮತಸಂಸ್ಕಾರಗಳಿಗೆ ಅವಕಾಶವನ್ನುಂಟುಮಾಡಿದ್ದರಿಂದ ಅಕ್ಕ ಮಹಾದೇವಿ, ವೀರಮ್ಮ, ರೆಮ್ಮವ್ವೆ, ರೇಚವ್ವೆ, ಸೋಮವ್ವೆ ಮೊದಲಾದ ಅನೇಕ ಸ್ತ್ರೀಯರು ಮಹಾಜ್ಞಾನಿಗಳಾಗಿದ್ದರೆಂಬುದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ. ಜ್ಞಾನಸಿದ್ಧರಾದ ಆ ಶಿವಶರಣರ ಮತ್ತು ಶಿವಶರಣೆಯರ ವಚನಗಳಲ್ಲಿಯೇ ವಾಚಕರ ಅವಗಾಹನಕ್ಕಾಗಿ ಒಂದೊಂದು ವಚನವನ್ನು ಈ ಪುಸ್ತಕದ ಕೊನೆಯಭಾಗದಲ್ಲಿ ಉದಾಹರಿಸಿದೆ. ಅವುಗಳನ್ನು ಓದಿದವರಿಗೆ ಆ ಮಹಾನುಭಾವರ ಯೋಗ್ಯತೆಯು ಎಂತಹ ಶ್ರೇಷ್ಠತರವಾದುದಾಗಿದ್ದಿತೆಂಬುದು ಸ್ಪಷ್ಟವಾಗುವುದು.

ಬಸವಣ್ಣನವರು ಶಿವಭಕ್ತಿಯುಳ್ಳ ಸದ್ಗುಣ ಸದಾಚಾರಿಗಳನ್ನು ಅವರು ಯಾವಕುಲದವರಾಗಿದ್ದರೂ ಭಿನ್ನ ಭೇದಗಳಿಲ್ಲದೆ ಎಲ್ಲರನ್ನೂ ಸಮಾನವಾಗಿಯೇ ಉನ್ನತಾವಸ್ಥೆಗೆ ತರಲುಪಕ್ರಮಿಸಿದುದು ಜನ್ಮ ವಿಶಿಷ್ಟವಾದ ವರ್ಣಕಲ್ಪನೆಗೊಳಗಾಗಿದ್ದ ಅನ್ಯ ಮತೀಯರಿಗೆ ಸರಿದೋರಲಿಲ್ಲ. ಆಗ ವೀರಶೈವರು ಶೂದ್ರರೆಂದು ಹೇಳಲುಪಕ್ರಮಿಸಿದುದರಲ್ಲಿ ಆಶ್ಚರ್ಯವೇನು? ಅನ್ಯರು ತಮಗೆ ಶೂದ್ರರೆಂದು ಹೇಳುವುದರಿಂದ ತಾವು ಕಡಿಮೆಯವರಾದೆವೆಂತಲೂ, ತಾವೂ ಅಂತಹ ಬ್ರಾಹ್ಮಣರೇ ಆಗಬೇಕೆಂತಲೂ ಇತ್ತಲಾಗಿ ಅನೇಕರಿಗೆ ತಪ್ಪುತಿಳುವಳಿಕೆಯುಂಟಾಗಿ ಬಸವಣ್ಣನವರು ತಪ್ಪುಮಾಡಿದರೆಂದು ಹೇಳುತ್ತಿದ್ದಾರೆ. ಇವರು ಹೀಗೆ ಹೇಳಿದರೂ ಈಗ ರಾಷ್ಟ್ರದಲ್ಲುಂಟಾಗಿರುವ ಜಾಗ್ರತೆಯನ್ನು ನೋಡುವವರಿಗೆ ಮಹಾತ್ಮರಾದ ಬಸವಣ್ಣನವರು ಜನ್ಮ ವಿಶಿಷ್ಟವಾದ ವರ್ಣಕಲ್ಪನೆಯನ್ನು ತೆಗೆದು ಹಾಕಿದುದು ತಪ್ಪಾಯಿತೋ ಅಥವಾ ವೈದಿಕ ಧರ್ಮದ ಅನ್ಯಮತೋದ್ಧಾರಕರು ಆ ಪ್ರಕಾರ ಮಾಡದಿದ್ದುದು ತಪ್ಪಾಯಿತೋ ಎಂಬುದು ಸ್ಪಷ್ಟವಾಗಿ ವ್ಯಕ್ತವಾಗದಿರಲಾರದು.

ಬಸವಣ್ಣನವರು ನಾನಾ ಕುಲದವರನ್ನು ತೆಗೆದು ಕೊಂಡದ್ದರಿಂದ ವೀರಶೈವಸಮಾಜದಲ್ಲಿ ಅನೈಕಮತ್ಯವೂ, ಕಲಹವೂ, ಉಂಟಾಗಿರುವವೆಂದು ಹೇಳುವುದು ವಿಹಿತವಲ್ಲ. ವೀರಶೈವಮತದಲ್ಲಿ ಲಿಂಗಾಂಗಿಗಳೆಲ್ಲಾ ಒಂದೇ ಎಂದು ಪ್ರತಿಪಾದಿಸಲ್ಪಟ್ಟಿರುವ ಸಮತ್ವದ ತತ್ವವನ್ನನುಸರಿಸಿ ಹೇಗೆ ಶ್ರೀ ಬಸವಾದಿಪ್ರಮಥರು ಆಚರಿಸಿದರೋ ಹಾಗೆಯೇ ಸಮಾಜದ ಸಕಲರೂ ಆಚರಿಸದೆ ಮತ್ತೆ ತಮ್ಮತಮ್ಮಲ್ಲಿಯೇ ಹೆಚ್ಚುಕಡಿಮೆಗಳೆಂಬ ಭಾವನೆಗಳನ್ನು ಕಲ್ಪಿಸಿಕೊಂಡುದರಿಂದ ಈ ಪ್ರಕಾರ ಕಲಹಗಳುಂಟಾಗಿವೆ. ತಾವು ವೀರ ಶೈವರೆಂದು ಹೇಳಿಸಿಕೊಳ್ಳಲಿಕ್ಕೂ, ಬಸವಣ್ಣನವರು ಪೂಜ್ಯರೆಂದು ಹೇಳು ವುದಕ್ಕೂ ಸಿದ್ಧರಿರುವಂತೆಯೇ, ವೀರಶೈವಮತದಲ್ಲಿಯೂ, ಬಸವಣ್ಣನವರ ಆಚರಣೆಯಲ್ಲಿಯೂ ಇದ್ದಪ್ರಕಾರವೇ ಎಲ್ಲಾ ಪಂಗಡಗಳ ವೀರಶೈವರೂ ಆಚರಿಸುತ್ತಾ ಬಂದಿದ್ದರೆ ಅನೈಕಮತ್ಯವೂ, ಕಲಹವೂ ಉಂಟಾಗುತ್ತಿರ ಲಿಲ್ಲ. ಇನ್ನಾದರೂ ಈ ತಪ್ಪನ್ನು ತಿದ್ದಿಕೊಳ್ಳದಿದ್ದರೆ ವೀರಶೈವ ಸಮಾ ಜಕ್ಕೆ ಆ ಮಹಾನುಭಾವರಿಂದುಂಟಾದ ಸಕಲ ಸೌಲಭ್ಯಗಳೂ ಖಂಡಿತವಾ ಗಿಯೂ ಒಂದೊಂದೇ ಲೋಪವಾಗುವುವು. ಬಸವಣ್ಣನವರು ಪ್ರಾರಂಭಿಸಿದ ಕಾರ್ಯವು ಈಗ ೭೦೦ ವರ್ಷಗಳಾದರೂ ಅದು ಸಂಪೂರ್ಣ ಪೂರೈಸಿದೆ ಯೆಂದು ಹೇಳಲಿಕ್ಕಾಗುವುದಿಲ್ಲ. ಒಳಭೇದಗಳೆಲ್ಲಾ ಒಂದಾಗತಕ್ಕ ಮಹ ತ್ಕಾರ್ಯವು ಇನ್ನೂ ಆಗತಕ್ಕದಿದೆ. ಅಂತಹ ಸುಪ್ರಸಂಗವು ಜಾಗ್ರತೆ ಬರುವುದರಲ್ಲಿ ಅಭ್ಯಂತರವೇ ಇಲ್ಲ.

ಬಸವಣ್ಣನವರು ಹಾಗೆಯೇ ಮತಪ್ರಸಾರಮಾಡಬೇಕಾಗಿದ್ದಿತೇವಿನಾ ಉತ್ತಮವರ್ಣದವರಿಗೂ, ಕೀಳುಕುಲದವರಿಗೂ, ಶರೀರಸಂಬಂಧವನ್ನು ಮತ್ತು ಊಟವ್ಯವಹಾರವನ್ನು ಬೆಳೆಸಬಾರದಾಗಿದ್ದಿತೆಂತಲೂ, ಹರಳಯ್ಯ ಮಧುವಯ್ಯಗಳಿಗೆ ಶರೀರಸಂಬಂಧ ಉಂಟಾಗದೆ ಇದ್ದಿದ್ದರೆ ಬಸವಣ್ಣನ ವರು ಕಲ್ಯಾಣವನ್ನು ಬಿಟ್ಟುಹೋಗುವ ಪ್ರಸಂಗವೇ ಬರುತ್ತಿದ್ದಿಲ್ಲವೆಂತಲೂ ಕೆಲವರು ಹೇಳುತ್ತಿದ್ದಾರೆ. ಆ ಮಹಾನುಭಾವರಿಂದ ಶಿವಮತವು ಇನ್ನೂ

ಹೆಚ್ಚು ಕಾಲ ಪ್ರಸಾರವಾಗಬೇಕಾಗಿದ್ದಿತೆಂಬ ಸದುದ್ದೇಶದಿಂದಲೇ ಇವರು ಈ ಪ್ರಕಾರ ಹೇಳುತ್ತಿರುವರು. ಈ ವಿಚಾರಸರಣಿಯು ಆರಂಭದಲ್ಲಿ ಸಮಂಜಸವಾಗಿ ತೋರಿದರೂ ವಿಚಾರಾಂತ್ಯದಲ್ಲಿ ಆ ಪ್ರಕಾರ ಊಟವ್ಯವಹಾರ ಮತ್ತು ಶರೀರಸಂಬಂಧಗಳನ್ನುಂಟುಮಾಡಿಸದೇ ಇದ್ದಿದ್ದರೆ ಮಹಾತ್ಮರಾದ ಬಸವಣ್ಣನವರ ಚರಿತ್ರೆಯಲ್ಲಿ ಅದೊಂದು ಕೊರತೆಯಾಗಿಯೇ ಪರಿಣಮಿಸುತ್ತಿದ್ದಿತೆಂಬುದು ವ್ಯಕ್ತವಾಗದಿರಲಾರದು. ಅಲ್ಲದೆ ಸಹಭೋಜನ ಮತ್ತು ಶರೀರಸಂಬಂಧಗಳುಂಟಾಗದಿದ್ದರೆ ಅವರು ಒಂದೇ ಮತದವರೆಂದು ಎಣಿಸಲ್ಪಡುತ್ತಲೂ ಇರಲಿಲ್ಲ. ಬಸವಣ್ಣನವರಿಗೆ ವೀರಶೈವ ಮತಪ್ರಸಾರಮಾಡುವುದೇ ಮುಖ್ಯೋದ್ದೇಶವಾಗಿದ್ದುದರಿಂದ ಈ ಉಭಯಕಾರ್ಯಗಳೂ ಪೂರ್ವದಲ್ಲಿ ಯಾರು ಯಾವ ಕುಲದವರಾಗಿದ್ದರೂ ವೀರಶೈವರಾದನಂತರ ಅವರೆಲ್ಲರೂ ಒಂದೇ ಎಂದು ತಿಳಿದು ಪರಸ್ಪರ ನಡೆಯುವಂತೆ ಮಾಡಿದುದೇ ವಿಹಿತವಾಯಿತು. ಅವರೇ ಈ ಪದ್ಧತಿಗಳನ್ನು ಪ್ರಚಾರದಲ್ಲಿ ತರಲು ಹಿಂಜರಿದಿದ್ದರೆ ಮುಂದಣದವರು ಆಚರಿಸುತ್ತಿದ್ದರೇ ?

ವೀರಶೈವಮತದ ಎಲ್ಲಾ ಶ್ರೇಷ್ಠತತ್ವಗಳನ್ನೂ ಅವರು ಆಚರಿಸಿಯೇ ತೋರಿಸಬೇಕಾಗಿದ್ದಿತು. ಅವು ಜನಗಳ ದೃಷ್ಟಿಗೆ ಎಷ್ಟೇ ದೋಷಯುಕ್ತವಾದವುಗಳಾಗಿ ತೋರುತ್ತಿದ್ದರೂ ಜನರ ದಾಕ್ಷಿಣ್ಯಕ್ಕಾಗಲಿ ಅಥವಾ ವಿರೋಧಕ್ಕಾಗಲಿ ಮನಸೋತು ಮತತತ್ವಗಳಿಗೆ ಲೋಪವುಂಟಾಗುವಂತೆ ಆಚರಿಸುವುದು ಅಂತಹ ಮತೋದ್ಧಾರಕರಿಗೆ ಶೋಭಿಸತಕ್ಕದಾಗಿದೆಯೇ ? ಆದುದರಿಂದಲೇ ತಮ್ಮ ವರ್ತನವನ್ನು ಕುರಿತು ಈ ಪ್ರಕಾರ ಹೇಳಿಕೊಂಡಿದ್ದಾರೆ.

> ನ್ಯಾಯ ನಿಷ್ಠುರ, ದಯಾದಾಕ್ಷಿಣ್ಯ ಪರನಾನಲ್ಲ. ಲೋಕವಿರೋಧಿ ಶರಣಂಗೆಯೂ ಅಂಜುವವನಲ್ಲ. ಕೂಡಲ ಸಂಗಮದೇವರ ರಾಜತೇಜದೊಳಿಪ್ಪನಾಗಿ.

ಈ ಮಹಾತ್ಮರು ನ್ಯಾಯಪ್ರಿಯರಾಗಿದ್ದರು. ತಮಗೆ ಸತ್ಯವೆಂದು ತೋರಿದುದನ್ನೇ ಚಿಕ್ಕಂದಿನಿಂದಲೂ ಆಚರಿಸುತ್ತಾ ಬಂದಿಲ್ಲವೇ ? ಯಾರ

ದಯೆ, ದಾಕ್ಷಿಣ್ಯ ವಿರೋಧಗಳಿಗಾದರೂ ವಶರಾಗಿ ಸತ್ಯಭ್ರಷ್ಟರಾದರೇ? ಸತ್ಯಕ್ಕೋಸ್ಕರವಾಗಿಯೇ ತಾಯಿತಂದೆಗಳನ್ನೂ, ಜನ್ಮಸ್ಥಳವನ್ನೂ, ಹುಟ್ಟಿದ ಕುಲವನ್ನೂ ಬಿಡಲಿಲ್ಲವೇ? ಇಂತಹ ಪರಮ ಸತ್ಯಾಗ್ರಹಿಗಳು ಫಲಾಪೇಕ್ಷೆಯಿಂದ ಮನಸ್ಸಿಗೆ ವಂಚಿಸಿ ಸಮಯಬಂದಂತೆ ನಡೆಯಲು ಸಿದ್ಧರಾಗುವರೇ? ಅನ್ಯರ ವಿರೋಧನಿಂದೆಗಳಿಗಂಜಿ ಕಾರ್ಯವಿಮುಖರಾಗುವರೇ? ಕೇವಲ ನಾಮಧಾರಿ ವೀರಶೈವರನ್ನು ಹೇಗಾದರೂ ಹೆಚ್ಚಿಸಬೇಕೆಂಬುದು ಅವರ ಉದ್ದೇಶವಾಗಿದ್ದರೆ ನಿಮ್ಮಲ್ಲಿ ನಾವು ಊಟಕ್ಕೆ ಬರುವುದಿಲ್ಲ; ಶರೀರ ಸಂಬಂಧವಂತೂ ಶಕ್ಯವೇ ಇಲ್ಲ; ಆದರೆ ನೀವೂ ವೀರಶೈವರೇ ಸರಿ. ನಾವು ನಿಮಗೆ ಗುರುಗಳೆಂದು ಹೇಳಿಕೊಳ್ಳುವಂತಹ ಒಂದು ವೀರಶೈವರ ಗುಂಪನ್ನೇರ್ಪಡಿಸುತ್ತಿದ್ದರು. ಆದರೆ ಈ ಪ್ರಕಾರ ಜನಾಂಗದ ಹಿತಕಾರ್ಯವನ್ನು ಅಪೂರ್ಣವಾದರೀತಿಯಲ್ಲಿ ಮಾಡುವುದು ಆ ಮಹಾನುಭಾವರ ಉದ್ದೇಶವಾಗಿರದೆ ಎಲ್ಲರೂ ನಿಜವಾದ ಶಿವಶರಣರಾಗಬೇಕೆಂಬುದೇ ಅವರ ಮನೋಗತವಾಗಿದ್ದುದರಿಂದ ಹರಳಯ್ಯ ಮಧುವಯ್ಯಗಳಿಗೆ ಶರೀರಸಂಬಂಧವನ್ನು ಬೆಳೆಸಲು ಅವಕಾಶಕೊಟ್ಟರಲ್ಲದೆ ಮಹಾ ಶಿವಶರಣರಾದ ಹರಳಯ್ಯನವರಿಗೆ ತಾವು "ಶರಣು ಶರಣು" ಎಂದು ನುಡಿದರು. ಈ ಪ್ರಕಾರ ಶಿವಶರಣರಿಗೆ ಅವರ ಪೂರ್ವಕುಲವನ್ನು ಯೋಚಿಸದೆ ತಾವು "ಶರಣು ಶರಣು" ಎಂದು ಹೇಳುವುದರಿಂದುಂಟಾಗಬಹುದಾದ ಸ್ಥಿತಿಯನ್ನೂ ಆ ಕಾಲದಲ್ಲಿ ತಾವು ವರ್ತಿಸುವುದನ್ನೂ, ಈ ಕೆಳಗಿನ ತಮ್ಮ ವಚನದಲ್ಲಿ ವಿವರಿಸಿದ್ದಾರೆ.

> ಎನಿಸೆನಿಸೆಂದರೆಯು ನಾಧೃತಿಗೆಡೆನಯ್ಯ. ಎಲುದೋರಿದಡೆ, ನರಹರಿದಡೆ,
> ಕರುಳುಕುಪ್ಪಳಿಸಿದಡೆ, ನಾಧೃತಿಗೆಡೆನಯ್ಯ. ಶಿರಹರಿದು ಅಟ್ಟಿನೆಲಕ್ಕೆ
> ಬಿದ್ದರೆ ನಾಲಿಗೆ ಕೂಡಲಸಂಗನ ಶರಣರಿಗೆ ಶರಣು ಶರಣೆನುತಿರ್ದುದು.

ಇಂತಹ ಮಹಾವೀರ ವ್ರತಶ್ರೇಷ್ಠರು ಅನ್ಯರಿಗಂಜಿ ವೀರಶೈವಮತತತ್ವಗಳಿಗೆ ವಿರೋಧವಾಗಿ ಆಚರಿಸುವರೇ? ತಾವು ಶ್ರೀ ಚೆನ್ನಬಸವದೇವನಿಗೆ

ಮೊದಲು ದೀಕ್ಷೆಯನ್ನು ಮಾಡಿ ಗುರುಗಳಾಗಿದ್ದರೂ * ತಮ್ಮ ಶಿಷ್ಯನಾದ ಚೆನ್ನಬಸವದೇವನು ಮಹಾ ಷಟಸ್ಥಳಜ್ಞಾನಿಯಾಗಲು ಆ ಮಹಾತ್ಮರಲ್ಲಿ ಶಿಷ್ಯತ್ವವನ್ನು ವಹಿಸಿ † ಪ್ರಾಣಲಿಂಗಾನುಸಂಧಾನವನ್ನು ಹೊಂದಿ ವೀರಶೈವರಲ್ಲಿ ಭಕ್ತಿ, ಜ್ಞಾನಾದಿಗಳಿಂದ ಮಾತ್ರ ಹೆಚ್ಚು ಕಡಿಮೆಗಳಿವೆಯೆಂಬ ತತ್ವವನ್ನು ವ್ಯಕ್ತಗೊಳಿಸಲಿಲ್ಲವೇ? ಪೂರ್ವದಲ್ಲಿ ತಮ್ಮ ಶಿಷ್ಯರಾಗಿದ್ದ ಚೆನ್ನಬಸವಣ್ಣನವರ ವಿಷಯದಲ್ಲಿ ಅವರು ಗುರುಗಳಾದನಂತರ ಅವರ ವಿಷಯದಲ್ಲಿ ಈ ಮಹಾನುಭಾವರಿಗೆ ಯಾವವಿಧವಾದ ಪೂಜ್ಯಬುದ್ಧಿಯುಂಟಾಗಿತ್ತೆಂಬುದು ಇವರ ಕೆಳಗಿನ ವಚನದಿಂದ ಸ್ಪಷ್ಟವಾಗುತ್ತದೆ.

> ಲೋಕದಿಚ್ಛೆಯ ನಡೆವವನಲ್ಲ. ಲೋಕದಿಚ್ಛೆಯ ನುಡಿವವನಲ್ಲ. ಲೋಕವಿರಹಿತಶರಣ, ಶರಣವಿರಹಿತ ಲೋಕವೆಂಬುದು ಕಾಣಬಂದಿತ್ತು ನೋಡಾ. ಲಿಂಗವೇಗೂಡಾಗಿ, ಜಂಗಮವೇ ಸ್ವಾಯತವಾಗಿ, ಪ್ರಸಾದವೇ ಪ್ರಾಣವಾಗಿ ಪರಿಣಾಮದಲ್ಲಿ ಇಪ್ಪನೋಡಯ್ಯ. ಕೂಡಲಸಂಗಮದೇವಾ, ನಿಮ್ಮಶರಣ ಚೆನ್ನಬಸವಣ್ಣಂಗೆ ನಮೋ, ನಮೋ, ಎಂಬೆನು.

ಜನರ ಸ್ತುತಿನಿಂದೆಗಳಿಗಾಗಲಿ, ಸಹಾಯವಿರೋಧಗಳಿಗಾಗಲಿ, ಬಸವಣ್ಣನವರು ಹಿಗ್ಗಿ ತಗ್ಗದೆ ವೀರಶೈವ ಮತತತ್ವಗಳನ್ನೆಲ್ಲಾ ತಾವು ಆಚರಿಸಿ ತೋರಿಸಿದ್ದಲ್ಲದೆ ಅನ್ಯರುಕೂಡಾ ಆಚರಿಸಲಿಕ್ಕೆ ಮಹತ್ತರವಾದ ಸಹಾಯ, ಸ್ವಾತಂತ್ರ್ಯ, ಸೌಲಭ್ಯಗಳನ್ನುಂಟುಮಾಡಿಕೊಟ್ಟುದರಿಂದಲೇ ಈ ಮಹಾತ್ಮರ ಚರಿತ್ರೆಯು ಇಷ್ಟು ಪವಿತ್ರತರವಾಗಿಯೂ ಶ್ರೇಷ್ಠವಾಗಿಯೂ ಪರಿಣಮಿಸಿತು. ಕೇವಲ ಅಹಿಂಸಾಯುಕ್ತವಾದ ಶಾಂತಿಮಯ ಭಕ್ತಿಮಾರ್ಗದಿಂದ ಈ ಮಹಾತ್ಮರು ಮತೋದ್ಧಾರದ ಕಾರ್ಯವನ್ನು ಮಾಡುತ್ತಿದ್ದರೂ ಬಿಜ್ಜಳರಾಜನ ಅವಿಚಾರದಿಂದಲು ಮತ್ತು ಕೆಲವು ಶರಣರ ಕೋಪತಾಪಗಳಿಂದಲು ಕೊನೆಗೆ

* ತಸ್ಮಾತ್ತು ತನಯೋಜಜ್ಞೇ ಶ್ರೀಚನ್ನಬಸವೇಶ್ವರಃ । ಗುರುಣಾಬಸವೇಶೇನ ಕೃತದೀಕ್ಷೋ ಮುದಾನ್ವಿತಃ ॥ ಸಂಸ್ಕೃತ ಬಸವಪುರಾಣ ಅ. ೧೧, ೧೦.

† ಚೆನ್ನಬಸವಪುರಾಣ ೬ ನೆಯ ಸಂಧಿ.

ಹಿಂಸೆ ಅಶಾಂತತೆಗಳುಂಟಾಗಿ ಬಿಜ್ಜಳನ ರಾಜ್ಯವು ಮತ್ತು ವೀರಶೈವ ಮತ ಪ್ರಸಾರದ ಕಾರ್ಯವು ಹಾಳಾದುದು ಅತ್ಯಂತ ವಿಷಾದಕರವಾದುದೇ ಸರಿ. ಈ ವಿಷಯವಾಗಿ ಬಸವಣ್ಣನವರೇ ತಮ್ಮ ಅಭಿಪ್ರಾಯವನ್ನು ಈ ಕೆಳಗಿನ ವಚನದಲ್ಲಿ ವ್ಯಕ್ತಗೊಳಿಸಿದ್ದಾರೆ.

> ಅರಸು ಅವಿಚಾರ, ಸಿದ್ಧಿ ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡೈ. ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು. ಸಂದಿತ್ತು ಕೂಡಲ ಸಂಗಮ ದೇವಾ ನಿಮ್ಮ ಕವಳಿಗೆ.

ಈ ಐತಿಹಾಸಿಕ ದೃಷ್ಟಾಂತದ ಮೇಲಿಂದ ಗೊತ್ತಾಗುವುದೇನೆಂದರೆ- ಒಂದು ಮಹತ್ಕಾರ್ಯವು ಎಷ್ಟೇ ಅಹಿಂಸಾ ಮತ್ತು ಶಾಂತತಾಯುಕ್ತವಾದುದಾಗಿದ್ದು ಅದನ್ನು ನಡೆಸುವ ಮಹಾತ್ಮನು ಎಂತಹ ಆತ್ಮ ಬಲಶಾಲಿಯಾಗಿದ್ದರೂ ವಿರೋಧಿಗಳಿಂದುಂಟಾಗುವ ಅನ್ಯಾಯವು ಕೆಲವುಮಟ್ಟಿಗೇನೇ ಸಕಲರಿಂದಲೂ ಸಹಿಸಲ್ಪಡುವುದು ಸಾಧ್ಯವು. ಮಿತಿಮೀರಿದ ಅನ್ಯಾಯ ಹಿಂಸೆಗಳುಂಟಾದರೆ ಜನರು ಕೋಪಸತಾಪಗಳಿಗೀಡಾಗಿ ಹಿಂಸಾಮಾರ್ಗವನ್ನನುಸರಿಸಿ ಉಭಯ ಪಂಗಡಗಳ ನಾಶಕ್ಕೂ ಕಾರಣರಾಗುವರು. ಆದಕಾರಣ ಒಂದು ಸಾರ್ವಜನಿಕ ಕಾರ್ಯವು ಬಹು ಜನಗಳಿಂದ ಅಹಿಂಸಾಪದ್ಧತಿಯನ್ನನುಸರಿಸಿ ನಡೆಯುತ್ತಿರುವಾಗ ಉಭಯಪಂಗಡದವರೂ ಬಹು ಎಚ್ಚರಿಕೆಯಿಂದಿರಬೇಕಾದುದು ಅತ್ಯವಶ್ಯಕವು.

ಬಸವಣ್ಣನವರ ಎಲ್ಲಾ ಕಾರ್ಯಗಳೂ ವಿಹಿತವಾದವುಗಳೆಂದು ಈ ವರೆವಿಗೂ ಪ್ರತಿಪಾದಿಸಿದಂತೆ ಈ ಮಹಾತ್ಮರು ರಾಜ್ಯಸೂತ್ರವನ್ನು ಹಿಡಿದುದೂ ಯುಕ್ತವಾಗಿದ್ದಿತೆಂದು ಹೇಳುವುದು ನನ್ನ ಅಲ್ಪಮತಿಗೆ ವಿಹಿತವಾಗಿ ತೋರುವುದಿಲ್ಲ. ಮತೋದ್ಧಾರಕರಾಗಿದ್ದ ಬಸವಣ್ಣನವರು ಮಂತ್ರಿಗಳಾಗಬಾರದಾಗಿದ್ದಿತು. ರಾಜ್ಯಸೂತ್ರವನ್ನು ಹಿಡಿದವರು ರಾಜ್ಯದಲ್ಲಿರುವ ಎಲ್ಲಾ ಮತೀಯರನ್ನೂ ಸಮಾನವಾಗಿಯೇ ಕಾಣಬೇಕಾದುದು ಧರ್ಮವಾಗಿದೆ. ಮತೋದ್ಧಾರಕರಾದರೋ ತಾವು ಪ್ರಸಾರಮಾಡಬೇಕಾದ ಮತವೂ,

ಆ ಮತಾವಲಂಬಿಗಳೂ, ಅಧಿಕರೆಂದೇ ಹೇಳಬೇಕಾದುದು ವಿಹಿತವಾಗಿದೆ. ಈ ಪರಸ್ಪರ ಭಿನ್ನವಾಗಿರುವ ಕಾರ್ಯಗಳು ಒಂದೇ ವ್ಯಕ್ತಿಯಿಂದ ಒಂದೇ ಕಾಲದಲ್ಲಿ ತೃಪ್ತಿಕರವಾಗಿ ಜರುಗುವುದು ಸಾಧ್ಯವೇ ಅಲ್ಲ. ಆದುದರಿಂದಲೇ ಬಸವಣ್ಣನವರು ಕೊನೆಗೆ ಮಂತ್ರಿತ್ವವನ್ನು ಬಿಟ್ಟು ಮತಪ್ರಸಾರಕಾರ್ಯವನ್ನೇ ಕೈಕೊಳ್ಳಬೇಕಾಯಿತು. ಮೊದಲಿನಿಂದಲೂ ಆ ಕಾರ್ಯವನ್ನು ವಹಿಸದೆ ಇದ್ದಿದ್ದರೆ ಅಲ್ಲಿ ಇಷ್ಟು ವಿರೋಧಗಳು ಹೆಚ್ಚುತ್ತಿರಲಿಲ್ಲ. ಮತ್ತು ಅದೊಂದೇ ಪಟ್ಟಣದಲ್ಲಿರದೆ ನಾನಾಭಾಗಗಳಲ್ಲಿ ಸಂಚರಿಸಲವಕಾಶವಾಗುತ್ತಿದ್ದಿತು. ಇದರಿಂದ ಈ ಮಹಾನುಭಾವರ ಅವತಾರಕೃತ್ಯವು ಇಷ್ಟು ಅತ್ಯಲ್ಪಕಾಲದಲ್ಲಿಯೇ ಪರಿಸಮಾಪ್ತಿಯಾಗದೆ ವೀರಶೈವ ಮತಾಭಿವೃದ್ಧಿಗೂ ಭರತಖಂಡದ ಶ್ರೇಯಸ್ಸಿಗೂ ಮಹತ್ತರವಾದ ಸಹಾಯವಾಗುತ್ತಿದ್ದಿತು. ಆದಕಾರಣ ಅಹಿಂಸಾಮಾರ್ಗದಿಂದ ಮತೋದ್ಧಾರಮಾಡುವವರು ರಾಜ್ಯಸೂತ್ರವನ್ನು ಹಿಡಿಯುವುದು ಅಷ್ಟು ಫಲಕಾರಿಯಲ್ಲವೆಂದು ಈ ಮಹಾನುಭಾವರ ಚರಿತ್ರೆಯಿಂದ ತಿಳಿದುಕೊಳ್ಳಬೇಕಾಗಿದೆ.

ಶ್ರೀ. ಬಸವಣ್ಣನವರು ವೀರಶೈವ ಮತೋದ್ಧಾರಕ್ಕೋಸ್ಕರ ನೂಡಿರುವ ಮಹತ್ಕಾರ್ಯಗಳನ್ನು ಮತ್ತು ಅವರ ವಿಷಯದಲ್ಲಿರತಕ್ಕ ಆಕ್ಷೇಪಗಳನ್ನು ಕುರಿತು ಈ ವರೆವಿಗೂ ಪ್ರಸ್ತಾಪಿಸಿದ್ದಾಯಿತಷ್ಟೆ. ಇನ್ನು ಈ ಮಹಾನುಭಾವರಿಂದ ಕರ್ನಾಟಕ ದೇಶಕ್ಕುಂಟಾದ ಫಲಪ್ರಯೋಜನಗಳನ್ನು ಕುರಿತು ಸ್ವಲ್ಪ ಯೋಚಿಸೋಣ. ಬಸವಣ್ಣನವರಿಂದ ಈ ದೇಶಕ್ಕಾದ ಹಿತಗಳಲ್ಲಿ ಸಾಮಾಜಿಕ ಸುಧಾರಣೆಯು ಒಂದು ಮುಖ್ಯವಾದುದಾಗಿದೆ. ಈ ಕಾಲದಲ್ಲಿ ಸಮಾಜ ಸುಧಾರಣೆಗಾಗಿ ಸಂಘಮೂಲಕ ಹಿಂದುಸ್ಥಾನದಲ್ಲಿ ಎಷ್ಟೋ ಪ್ರಯತ್ನಗಳು ನಡೆಯುತ್ತಲಿದ್ದರೂ ಇವೆಲ್ಲವುಗಳಿಗಿಂತಲೂ ಬಸವಣ್ಣನವರು ಧಾರ್ಮಿಕರೀತಿಯಿಂದ ಮಾಡಿದ ಸಾಮಾಜಿಕ ಸುಧಾರಣೆಯು ದೇಶಕ್ಕೆ ಅತ್ಯಧಿಕವಾದ ಶಾಶ್ವತ ಪ್ರಯೋಜನವನ್ನುಂಟುಮಾಡಿತು. ಸ್ತ್ರೀಯಾಗಿ ಹುಟ್ಟಿದುದರಿಂದ ವಿವಾಹವಾಗಿಯೇ ತೀರಬೇಕಾಗಿದ್ದ ಪ್ರತಿಬಂಧವು

ನಿವಾರಣೆಯಾಗಿ ಪುರುಷರಂತೆಯೇ ಕೇವಲ ಪರಮಾತ್ಮಚಿಂತನೆಯಲ್ಲಿ ಆಸಕ್ತ ರಾಗಿ ಮಹಾಮಹಾ ಯೋಗಿನಿಯರಾಗಲು ಸ್ತ್ರೀಯರಿಗೆ ಅವಕಾಶವುಂಟಾ ಯಿತು. ಚಿಕ್ಕಂದಿನಲ್ಲಿಯೇ ತಾಯಿತಂದೆಗಳ ಇಷ್ಟದಂತೆ ಲಗ್ನವಾಗಿ ಸಂಸಾ ರಭಾರವನ್ನು ಹೊತ್ತುಕೊಂಡು ತಾವು ಅಲ್ಪಾಯುಗಳಾಗುವುದಲ್ಲದೆ ಅರೆ ಆಯುಷ್ಯದ ಜನಾಂಗವನ್ನುಂಟುಮಾಡಲಿಕ್ಕೆ ಕಾರಣರಾಗುವಂತಹ ಇಲ್ಲವೆ ಅವರ ದುರಾದೃಷ್ಟದಿಂದ ಪತಿವಿಯೋಗವಾದರೆ ಬಲಾತ್ಕಾರವಾಗಿ ತಲೆ ಬೋಳಿಸಲ್ಪಟ್ಟು ಸನ್ಯಾಸವ್ರತ ಸ್ವೀಕರಿಸಲ್ಪಡುವಂತಹ ಸ್ತ್ರೀಜಾತಿಯ ದುಸ್ಥಿತಿಯು ಎಷ್ಟೋ ನಿವಾರಣೆಯಾಗಿ ಪ್ರಾಚೀನಭಾರತೀಯರಲ್ಲಿದ್ದ ಸ್ತ್ರೀ ಪ್ರೌಢವಿವಾಹವು ಆಚರಣೆಯಲ್ಲಿ ಬಂದಿತು. ಪ್ರೌಢವಿವಾಹವು ಪ್ರಾರಂಭ ವಾದುದರಿಂದ ಈಗಿನ ಸಮಾಜ ಸುಧಾರಕರು ಅಪೇಕ್ಷಿಸುವ ವಿಧವಾ ವಿವಾಹದ ಆವಶ್ಯಕತೆಯು ಎಷ್ಟೋಮಟ್ಟಿಗೆ ಉಳಿಯಲೇ ಇಲ್ಲ. ಶ್ರೀ ಬಸವಣ್ಣನವರು ವಿಧವಾ ವಿವಾಹವನ್ನು ಆಚರಣೆಯಲ್ಲಿ ತಂದರೆಂದು ಈಗಿನ ಸಮಾಜ ಸುಧಾರಕರಲ್ಲನೇಕರು ಹೇಳುವುದುಂಟು. ಇದು ಶುದ್ಧ ಸುಳ್ಳು ಸಂಗತಿಯಾಗಿದೆ. ವಿಧವಾ ವಿವಾಹವು ವೀರಶೈವಮತದಲ್ಲಿ ನಿಷೇಧಿಸಲ್ಪ ಟ್ಟಿದೆ. * ಈ ಅಶಾಸ್ತ್ರೀಯವಾದ ನಡತೆಯನ್ನು ಬಸವಣ್ಣನವರು ಹೇಗೆ ತಾನೆ ಆಚರಣೆಯಲ್ಲಿ ತರುವರು? ವೀರಶೈವರಲ್ಲಿ ಕೆಲವರು ತಮ್ಮ ಪೂರ್ವ ಕುಲಕ್ರಮಾನುಗುಣ್ಯವಾಗಿ ಎಲ್ಲಿಯಾದರೂ ವಿಧವಾ ವಿವಾಹವನ್ನಾಚರಿಸು ವುದುಂಟು. ಇದನ್ನು ನೋಡಿಯೇ ಬಸವಣ್ಣನವರು ಈ ಆಚರಣೆಯನ್ನು ರೂಢಿಯಲ್ಲಿ ತಂದರೆಂದು ಕೆಲವರು ಭಾವಿಸಿರಬೇಕು. ಬಸವಣ್ಣನವರಿಂದ ಸ್ತ್ರೀ ಜನಾಂಗದ ಸಾಮಾಜಿಕ ಪಾರತಂತ್ರ್ಯ ಮತ್ತು ನಾನಾ ಹಿಂಸೆಗಳು ಈ ದೇಶದಲ್ಲಿ ಎಷ್ಟೋಮಟ್ಟಿಗೆ ನಿವಾರಣೆಯಾದವೆಂಬುದು ನಿರ್ವಿವಾದವಾದ ಸಂಗತಿಯಾಗಿದೆ.

---

* ಪತಿಮನ್ಯಂನಗಂತವ್ಯಂ ಗತಾ ಚೇನ್ನರಕಂವ್ರಜೇತ್ ।

ಪಾರಮೇಶ್ವರಾಗಮ. ಪ. ೧೯. ಶ್ಲೋ. ೧೧೦.

ಈ ಪ್ರಕಾರ ಸ್ತ್ರೀ ಸಮಾಜವನ್ನು ಉನ್ನತಿಗೆ ತಂದಂತೆಯೇ ಕೀಳು ಕುಲದವರೆಂದು ಸಕಲರಿಂದಲೂ ಉಪೇಕ್ಷಿಸಲ್ಪಟ್ಟಮೂಲಕ ಯಾವಜನರು ಅಧೋಗತಿಗೀಡಾಗಿದ್ದರೋ ಅಂತಹ ಅಂತ್ಯಜಾದಿ ಅಸಂಖ್ಯ ದೇಶಬಾಂಧವ ರನ್ನೂ ಮೇಲಕ್ಕೆತ್ತಿ ಅವರಲ್ಲಿ ಶ್ರೇಷ್ಠತರವಾದ ಧಾರ್ಮಿಕ ಭಾವನೆಯನ್ನುಂ ಟುಮಾಡಿ ಮದ್ಯಮಾಂಸಗಳ ಸೇವನೆಯನ್ನು ನಿಲ್ಲಿಸಿ ಸದಾಚಾರ ಸದ್ಗುಣಗ ಳುಂಟಾಗುವಂತೆ ಮಾಡಿದರು. ಯಾವಕುಲದವರಾಗಿದ್ದರೂ ತಾವು ಸದಾ ಚಾರಿಗಳಾದರೆ ಜನಾಂಗದಲ್ಲಿ ಸಮಾನತ್ವವನ್ನು, ಇಷ್ಟೇ ಅಲ್ಲ, ಪೂಜ್ಯತ್ವ ವನ್ನು ಕೂಡಾ ಹೊಂದಲು ಬರುತ್ತದೆಂಬ ನಂಬಿಕೆಯುಂಟಾಗುವಂತೆ ಮಾಡಿ ದುದರಿಂದ ಸನ್ಮಾರ್ಗಪ್ರವರ್ತನೆಯು ಅತ್ಯಧಿಕವಾಯಿತು. ಸ್ತ್ರೀ ಸ್ವಾತಂ ತ್ರ್ಯ, ಮದ್ಯಪಾನ ಪ್ರತಿಬಂಧ, ಮಾಂಸಾಹಾರನಿಷೇಧ, ಗೃಹನೈರ್ಮಲ್ಯ ಮೊದಲಾದ ದೇಶದೇಳಿಗೆಯ ವಿಷಯಗಳು ಜನರ ಆಚರಣೆಯಲ್ಲಿ ಬರಬೇ ಕೆಂದು ಈಗ ಎಷ್ಟು ಜನರು ಸಾಮಾಜಿಕ ಪರಿಷತ್ತುಗಳಿಂದಲೂ ಸಂಘಗಳಿಂ ದಲೂ ಪ್ರಯತ್ನಿಸುತ್ತಿದ್ದರೂ ಯಾವ ಫಲಪ್ರಾಪ್ತಿಯು ಆಗಿಲ್ಲವೋ ಅದು ಈ ದೇಶಕ್ಕೆ ಆ ಮಹಾನುಭಾವರು ಮಾಡಿದ ಧರ್ಮಪ್ರಸಾರದಿಂದಲೇ ಪ್ರಾ ಪ್ತವಾಯಿತು. ಏಕೆಂದರೆ, ಶ್ರೀಮಾನ್ ಕೆ. ಪಿ. ಪುಟ್ಟಣ್ಣಶೆಟ್ಟರು ಸಿ. ಐ. ಇ. ಇವರು ಎಂಟನೆಯ ವೀರಶೈವಮಹಾ ಸಭಾಧ್ಯಕ್ಷರಾಗಿ ಮಾಡಿದ ಉಪ ನ್ಯಾಸದಲ್ಲಿ ಹೇಳಿರುವಂತೆ ಬಸವಣ್ಣನವರು ಭಗವಾನ್ ಬುದ್ಧದೇವನಿಗೆ ಸಮಾನರಾದ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳ ಜೀರ್ಣೋ ದ್ಧಾರಕರಾಗಿದ್ದರು. *

ಕರ್ನಾಟಕದ ಹಳ್ಳಿಗಳಿಗೂ ಮಹರಾಷ್ಟ್ರ ಮೊದಲಾದ ಅನ್ಯದೇಶಗಳ ಹಳ್ಳಿಗಳಿಗೂ ಹೋಲಿಸಿ ನೋಡಿದರೆ ಬಸವಣ್ಣನವರಿಂದ ಕರ್ನಾಟಕದ

---

* Basaveswara was truly a great social and religious reformer, not inferior I should say to the immortal Buddha, the star of the East.

ಸಾಮಾಜಿಕ ಸುಧಾರಣೆಯು ಎಷ್ಟರಮಟ್ಟಿಗೆ ಆಗಿದೆಯೆಂಬುದು ಸ್ಪಷ್ಟವಾಗುವುದು. ಬೇರೆದೇಶಗಳ ಹಳ್ಳಿಗಳಲ್ಲಿ ಮಾಂಸಾಹಾರ, ಮದ್ಯಪಾನ, ಅಶುಚಿ ಮೊದಲಾದವುಗಳೆಷ್ಟಿರುತ್ತವೆಯೋ ಅಷ್ಟು ಈ ದೇಶದ ಹಳ್ಳಿಗಳಲ್ಲಿರುವುದಿಲ್ಲ. ಏಕೆಂದರೆ, ವೀರಶೈವರಿಗೆ ಒಕ್ಕಲತನವೇ ಮುಖ್ಯೋದ್ಯೋಗವಾಗಿರುವುದರಿಂದ ಇವರು ಹಳ್ಳಿಗಳಲ್ಲಿ ವಾಸವಾಗಿರುವುದೇ ಹೆಚ್ಚು. ಈ ವಿಷಯವಾಗಿ ಮಹಾ ಅನುಭವಶಾಲಿಗಳಾದ ಶ್ರೀಮಾನ್. ಕೆ. ಪಿ. ಪುಟ್ಟಣ್ಣಶೆಟ್ಟರವರು ತಮ್ಮ ಮೇಲಣ ಭಾಷಣದಲ್ಲಿ ಹಳ್ಳಿಗಳಲ್ಲಿರುವ ವೀರಶೈವರ ಮನೆಗಳು ಅಲ್ಲಿರತಕ್ಕ ಅನ್ಯಮತೀಯರ ಮನೆಗಳಿಗಿಂತಲೂ ಹೆಚ್ಚು ನಿರ್ಮಲವಾಗಿರುತ್ತವೆಂದು † ಹೇಳಿರುವುದು ಯಥಾರ್ಥವಾದ ಸಂಗತಿಯೆಂದು ಸಕಲರಿಗೂ ಗೊತ್ತಾಗುವುದು. ಈ ಪ್ರಕಾರ ಬಸವಣ್ಣನವರ ಸರ್ವಾಂಗವಿಶಿಷ್ಟ ಸಾಮಾಜಿಕ ಸುಧಾರಣೆಯು ಹಳ್ಳಿಗಳ ಗುಡಿಸಲಿನವರೆಗೂ ಹೋಗಿ ಮುಟ್ಟಿರುವುದರಿಂದಲೇ "ಟೈಮ್ಸ್ ಆಫ್ ಇಂಡಿಯಾ" ಪತ್ರಿಕಾಕರ್ತರು ತಾ॥ ೧೭-೫-೧೯೧೧ನೆಯ ಪತ್ರಿಕೆಯಲ್ಲಿ ಈ ಪ್ರಕಾರ ಬರೆದಿದ್ದಾರೆ.*

"ಭರತಖಂಡದಲ್ಲಿ ಬಸವನಮುಂಚೆ ಪ್ರಸಿದ್ಧರಾದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರು ಆಯಾಯ ವಿಷಯಗಳಿಗೆ ಸಂಬಂಧಿಸಿದ ಯಾವುದಾದರೊಂದು ಸಂಗತಿಗೇನೇ ಹೆಚ್ಚು ಮಹತ್ವವನ್ನು ಕೊಟ್ಟು ಅನ್ಯವಿಷಯ

---

† It is a matter of common knowledge that the quarters inhabited by Lingayets in a village are more cleanly and comparatively less dirty than those occupied by their brothren of other denominations.

* It was the distinctive feature of his mission that while illustrious religious and social reformers in India before him had each laid his emphasis on one or other items of religious and social reform, either subordinating more or less other items to it, or ignoring them altogether, Basawa sketched

ಗಳನ್ನು ಉಪೇಕ್ಷಿಸಿದ್ದರು, ಅಥವಾ ಅವುಗಳಿಗೆ ಗೌಣತ್ವವನ್ನು ಕೊಟ್ಟಿದ್ದರು. ಆದರೆ ಬಸವನು ಸ್ತ್ರೀಯರ ಸ್ವಾತಂತ್ರ್ಯ ಮತ್ತು ಅಭಿವೃದ್ಧಿಗಳನ್ನೇ ಮುಖ್ಯವಾಗಿಟ್ಟುಕೊಂಡು ಸಮಾಜ ಸುಧಾರಣೆಯ ಸರ್ವಾಂಗವಿಶಿಷ್ಟವಾದ ಬಹು ದೊಡ್ಡ ಕಾರ್ಯಕ್ರಮವನ್ನು ಗೊತ್ತು ಪಡಿಸಿ ಅತಿಧೈರ್ಯದಿಂದ ಅದನ್ನು ಸಾಗಿಸಿದನು.

ಭರತಖಂಡದ ಎಲ್ಲಾ ಭಾಗಗಳಲ್ಲಿಯೂ ಈ ಕಾಲದಲ್ಲಿ ಪ್ರತಿವರ್ಷ ಸೇರುತ್ತಿರುವ ಸಾಮಾಜಿಕ ಪರಿಷತ್ತುಗಳಾಗಲಿ ಅಥವಾ ಈ ದೇಶದ ಸಮಾಜಸುಧಾರಕರಾಗಲಿ ಬಸವನ ಕಾರ್ಯಕ್ಕಿಂತ ಹೆಚ್ಚಿನದಾವುದನ್ನೂ ಮಾಡಲಾರರು. ಭರತಖಂಡದ ಚರಿತ್ರೆ ಮತ್ತು ಭಾರತೀಯರ ಆಚಾರ ಪದ್ಧತಿಗಳನ್ನು ಬಹು ಚೆನ್ನಾಗಿ ತಿಳಿದುಕೊಂಡಿದ್ದ ಸರ್ ಜೇಮ್ಸ್ ಕ್ಯಾಂಬಲ್‌ರವರು ಹೇಳಿರುವಂತೆ ಭರತಖಂಡದ ಈಗಿನ ಸಮಾಜ ಸುಧಾರಕನು ಬಸವನ ನುಡಿಯನ್ನೇ ನುಡಿಯುತ್ತಲೂ, ಆತನ ಅಭಿಪ್ರಾಯವನ್ನೇ ಬೋಧಿಸುತ್ತಲೂ, ಇದ್ದಾನೆ. ”

---

and boldly tried to work out a large and comprehensive programme of social reform with the elevation and independance of womanhood as its guiding point.

Neither social conferences which are annually held in these days in several parts of India, nor Indian social reformers, can improve upon that programme as to the essentials. As was in substance remarked by the late Sir James Campbell, whose knowledge of Indian History, customes and manners was almost phenomenal, the present day social reformer in india is but speaking the language and seeking to enforce the mind of Basawa.

TIMES OF INDIA,

*17th May 1918.*

ಬಸವಣ್ಣನವರ ಅವತಾರದಿಂದ ದೇಶದ ಸಾಮಾಜಿಕ ಸುಧಾರಣೆ ಯಾದಂತೆಯೇ ಸಂಪದಭಿವೃದ್ಧಿಗೆ ಮುಖ್ಯಸಾಧನಗಳಾದ ಸಕಲ ಕೈ ಕಸಬ ಗಳೂ ಸಂರಕ್ಷಿಸಲ್ಪಟ್ಟವಲ್ಲದೆ ಪ್ರೋತ್ಸಾಹವನ್ನೂ ಹೊಂದಿದವು. ಏಕೆಂದರೆ, ಬಸವಣ್ಣನವರು ಯಾವ ಕೈ ಕಸಬೂ ನಿಂದ್ಯವಾದುದೆಂದು ಹೇಳಲಿಲ್ಲ. ಇಷ್ಟೇ ಅಲ್ಲ ; ಎಲ್ಲಾ ಕೈ ಕಸಬುಗಳೂ ಉತ್ತಮವಾದವುಗಳೆಂದೇ ತಿಳಿದು ಅವುಗಳಿಗೆ ಸಮಾನ ಯೋಗ್ಯತೆಯನ್ನು ಕೊಟ್ಟರು. ಯಾರು ಯಾವ ಕಸ ಬನ್ನೇ ಮಾಡುತ್ತಿದ್ದರೂ ಅವರು ಶಿವಭಕ್ತಿ ಸದಾಚಾರ ಸಂಪನ್ನರಾಗಿದ್ದರೆ ಪೂಜ್ಯರೆಂದೇ ಭಾವಿಸಿದ್ದರು. ಈ ವಿಷಯವಾಗಿ ತಮ್ಮ ಅಭಿಪ್ರಾಯವನ್ನು ಈ ಕೆಳಗಿನ ವಚನದಲ್ಲಿ ವ್ಯಕ್ತಪಡಿಸಿದ್ದಾರೆ.

> ದೇವಸಹಿತ ಭಕ್ತರು ಮನೆಗೆ ಬಂದರೆ, ಕಾಯಕವಾವುದೆಂದು ಬೆಸ ಗೊಂಡೆನಾದರೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ತಲೆದಂಡ, ತಲೆ ದಂಡ, ಕೂಡಲಸಂಗಮದೇವಾ. ಭಕ್ತರಲ್ಲಿ ಕುಲವನರಸಿದರೆ, ನಿಮ್ಮ ರಾಣಿವಾಸದಾಣೆ.

ಸಕಲರೂ ಏನಾದರೊಂದು ಸದುದ್ಯೋಗವನ್ನು ಮಾಡಿಯೇ ಗುರು ಲಿಂಗ ಜಂಗಮ ಸೇವಾತತ್ಪರರಾಗಿ ಜೀವಿಸುವ ಸ್ವಾವಲಂಬನೆಯ ತತ್ವವನ್ನು ಆಚರಣೆಯಲ್ಲಿ ತಂದುದರಿಂದ ಎಲ್ಲಾ ಕೈ ಕಸಬುಗಳೂ ವೀರಶೈವಸಮಾಜ ದಲ್ಲಿ ಈ ವರೆವಿಗೂ ಉಳಿದು ಯಾವ ವಿಷಯದಲ್ಲಿಯೂ ಅನ್ಯ ಸಮಾಜದ ಸಹಾಯವನ್ನಪೇಕ್ಷಿಸದೆ ತಾನೇ ಎಲ್ಲಾ ಸಮಾಜಗಳಿಗೂ ಸಹಾಯಮಾಡು ತ್ತಿರುವ ಶ್ರೇಷ್ಠತರವಾದ ಸ್ಥಿತಿಯು ಈ ವೀರಶೈವ ಸಮಾಜಕ್ಕೆ ಪ್ರಾಪ್ತವಾ ಯಿತು. ಈ ಪ್ರಕಾರ ಜನಾಂಗದ ರಕ್ಷಣೆ ಮತ್ತು ಪೋಷಣೆಗಳಿಗೆ ಸಾಧ ನಗಳಾದ ಸರ್ವಾಂಗಗಳೂ ಸಂಪುಷ್ಟವಾಗಿರತಕ್ಕುದೇ ಸುಧಾರಣೆಯನ್ನೂ, ಸಂಪೂರ್ಣಸ್ಥಿತಿಯನ್ನೂ ಹೊಂದಿದ ಸಮಾಜದ ಲಕ್ಷಣವೆಂದು ಸಮಾಜಶಾ ಸ್ತ್ರದಿಂದ ಸಿದ್ಧವಾಗುತ್ತದೆ. ಬಡಿಗರ, ಚಿಂಪಿಗರ, ಕಮ್ಮಾರರ, ಬಣ್ಣಗಾ ರರ, ಅಕ್ಕಸಾಲಿಗರ, ಮತ್ತು ಮಡಿವಾಳರ ಉದ್ಯೋಗಗಳು ಹೀನವಾದವು

ಗಳೆಂದು ತಿಳಿದು ಈ ಕೈ ಕಸಬಿನವರನ್ನು ಕಳ್ಳರ, ದುಷ್ಟರ, ಪಂಗ್ತಿಯಲ್ಲಿ ಸೇರಿಸಿ ಇವರ ಮನೆಯ ಅನ್ನವನ್ನು ಸೇವಿಸಬಾರದೆಂದು ಮನುಸ್ಮೃತಿಯಲ್ಲಿ ಹೇಳಿದಪ್ರಕಾರ * ಬಸವಣ್ಣನವರೂ ಈ ಶ್ರೇಷ್ಠತರವಾದ ಕೈ ಕಸಬುಗಳು ಕೀಳೆಂದು ಹೇಳಿದ್ದರೆ ಜನಾಂಗವು ಎಷ್ಟೋ ಬಡತನಕ್ಕೀಡಾಗಿ ಪರಾವಲಂಬನೆಯಿಂದ ಜೀವಿಸಬೇಕಾಗುತ್ತಿದ್ದಿತು.

ಕೈ ಕಸಬುಗಳನ್ನು ಮಾಡುವವರೆಲ್ಲಾ ಕೀಳೆಂತಲೂ ಕೇವಲ ಬೌದ್ಧಿಕ ಉನ್ನತಿಯುಳ್ಳವರೇ ಶ್ರೇಷ್ಠರೆಂತಲೂ ತಿಳಿದ ಘಾತಕವಾದ ಆ ತಪ್ಪು ತಿಳುವಳಿಕೆಯನ್ನು ಈ ಮಹಾನುಭಾವರು ಹೋಗಲಾಡಿಸಿ ವೀರಶೈವರು ವೀರಶೈವರಿಂದಲೇ ಆದ ಪದಾರ್ಥಗಳನ್ನು ಉಪಯೋಗಿಸಬೇಕಾದ ವೀರಶೈವ ಮತದ ಶೀಲಗಳು ಆಚರಣೆಯಲ್ಲಿ ಬರುವಂತೆ ಮಾಡಿದುದರಿಂದ ಎಲ್ಲಾ ಕೈ ಕಸಬುಗಳಿಗೂ ಮಹತ್ತರವಾದ ಪ್ರೋತ್ಸಾಹವುಂಟಾಯಿತು. ಆದಕಾರಣ ಈಗಲುಕೂಡಾ ಒಕ್ಕಲತನ, ವ್ಯಾಪಾರ, ನೇಯುವುದು, ಬಣ್ಣಾಕೊಡುವುದು, ಹೊಲಿಯುವುದು, ಬಟ್ಟೆಗಳನ್ನು ತೊಳೆಯುವುದು, ಎಣ್ಣೆ ತೆಗೆಯುವುದು, ಮಣ್ಣಿನಪಾತ್ರೆಗಳನ್ನು ಮಾಡುವುದು, ಬಳೆಮಾಡುವುದು, 1 ಮರದ ಕೆಲಸಮಾಡುವುದು 2 ತಾಂಬ್ರದಕೆಲಸಮಾಡುವುದು 3 ಕಬ್ಬಿಣದ ಕೆಲಸ ಮಾಡುವುದು 4 ಮನೆಕಟ್ಟುವುದು 5 ತೋಟದಕೆಲಸ ಮಾಡುವುದು 6 ಈ ಮೊದಲಾದ ಜನಾಂಗಕ್ಕೆ ಅತ್ಯಾವಶ್ಯಕವಾಗಿರುವ ಎಲ್ಲಾ ಕಸಬುಗಳನ್ನು ಮಾಡುವವರೂ ಈ ವೀರಶೈವಸಮಾಜದಲ್ಲಿದ್ದಾರೆ. ಈ ಪ್ರಕಾರ ಸಮಾಜದಲ್ಲಿರುವವರೆಲ್ಲರೂ ದುಡಿಯುತ್ತಿರುವುದರಿಂದ ಇದೊಂದು ಸದುದ್ಯೋಗಿಗಳ ಕುಟುಂಬದಂತೆ ಧನಸಂಪನ್ನವಾದ ಸಮಾಜವಾಗಿದೆ. ವೈದಿಕ ಧರ್ಮದ

---

* ಅಧ್ಯಾಯ ೪. ಶ್ಲೋ. ೨೧೦, ೨೧೪, ೨೧೫, ೨೧೬.

1. ಉತ್ತರಕಾನಡಾ ಮತ್ತು ಬೆಳಗಾಂವ ಜಿಲ್ಲೆಗಳಲ್ಲಿದ್ದಾರೆ. 2. ಸೊಲ್ಲಾಪುರಜಿಲ್ಲೆಯಲ್ಲಿ. 3. ವಿಜಾಪುರಜಿಲ್ಲೆಯಲ್ಲಿ. 4. ವಿಜಾಪುರ, ಸೊಲ್ಲಾಪುರಜಿಲ್ಲೆಗಳಲ್ಲಿ. 5. ವಿಜಾಪುರಜಿಲ್ಲೆಯಲ್ಲಿ. 6. ವಿಜಾಪುರಜಿಲ್ಲೆಯಲ್ಲಿ.

ಇನ್ನಾವ ಸಮಾಜಗಳಲ್ಲಿಯೂ ಇಲ್ಲದಿರುವ ಈ ಶ್ರೇಷ್ಠತರವಾದ ವ್ಯವಸ್ಥೆಯು ದೇಶದ ಸಂಪದಭಿವೃದ್ಧಿಗೂ, ಸ್ವಾವಲಂಬನೆಗೂ, ಅತ್ಯಂತ ಪ್ರಯೋಜನವಾದುದಾಗಿಲ್ಲವೇ ?

ಬಸವಣ್ಣನವರು ವೀರಶೈವಮತದಲ್ಲಿ ಇದೊಂದು ನೂತನ ಸುಧಾರಣೆಯನ್ನೇನೋ ಮಾಡಲಿಲ್ಲ. ಪೂರ್ವದಿಂದಲೂ ವೀರಶೈವರಲ್ಲಿ ನಾನಾ ಕಸಬಿನವರು ಇದ್ದೇ ಇದ್ದರು. ಹತ್ತನೆಯ ಶತಮಾನದಲ್ಲಿ ಆಗಿಹೋದ ಶ್ರೀ ಶಂಕರದಾಸಿಮಯ್ಯರೆಂಬ ಮಹಾ ಶಿವಶರಣರು ಸೂಜಿಯ ಕಾಯಕವನ್ನು (ಹೊಲಿಯುವುದನ್ನು) ಶ್ರೀ ಜೇಡರದಾಸಿಮಯ್ಯರೆಂಬುವವರು ಒಟ್ಟಿಗಳನೇಯುವ ಕಾಯಕವನ್ನು ಮಾಡುತ್ತಿದ್ದರಷ್ಟೆ. ಹನ್ನೊಂದನೆಯ ಶತಮಾನದಲ್ಲಿ ಬೆಳ್ಳಗಾವಿಯಲ್ಲಿದ್ದ ವೀರಶೈವರಲ್ಲಿ ಅನೇಕ ವೀರಬಣಜಿಗರು ಜಲಸ್ಥಳ ಮಾರ್ಗಗಳಿಂದ ಪರದೇಶಸ್ವದೇಶಗಳಲ್ಲಿ ವ್ಯಾಪಾರಮಾಡುತ್ತಿದ್ದರೆಂದು ಹಿಂದೆ ಒಂದನೆಯ ಪ್ರಕರಣದಲ್ಲಿಯೇ ಹೇಳಲ್ಪಟ್ಟಿದೆ. ಆದಕಾರಣ ಈ ನಾನಾ ಕೈಕಸಬುಗಳನ್ನು ಮಾಡುತ್ತಿದ್ದ ವೀರಶೈವರು ಪ್ರಾಚೀನಕಾಲದಲ್ಲಿಯೂ ಇದ್ದರೆಂದು ಸಿದ್ಧವಾಗುತ್ತದೆ. ಬಸವಣ್ಣನವರು ಈ ಶ್ರೇಷ್ಠವಾದ ಪದ್ಧತಿಯನ್ನು ತೆಗೆದುಹಾಕದೆ ಅದನ್ನೇ ಹೆಚ್ಚಾಗಿ ಪ್ರೋತ್ಸಾಹಿಸಿ ದೇಶದ ಸಂಪದಭಿವೃದ್ಧಿಗೆ ಬಹು ಸಹಾಯವನ್ನು ಮಾಡಿದರು.

ಈ ಮಹಾತ್ಮರ ಮಹತ್ಕಾರ್ಯದಿಂದ ದೇಶದ ಸಾಮಾಜಿಕ, ಮತ್ತು ಸಾಂಪತ್ತಿಕ ಉನ್ನತಿಗಳಾದಂತೆಯೇ ಬೌದ್ಧಿಕ ಅಭಿವೃದ್ಧಿಯೂ ಉಂಟಾಯಿತು. ಏಕೆಂದರೆ, ಮಾತೃಭಾಷೆಯಾದ ಕನ್ನಡದಲ್ಲಿಯೇ ಧಾರ್ಮಿಕ, ಸಾಮಾಜಿಕ, ನೈತಿಕ ವಿಷಯಗಳನ್ನು ಬೋಧಿಸಲುಪಕ್ರಮಿಸಿದರು. ಅದರಿಂದ ಜನಸಾಮಾನ್ಯರಲ್ಲಿ ಕೂಡಾ ವಿಶೇಷವಾದ ವಿಚಾರಕ್ರಾಂತಿಯಾಗಿ ಲೋಕಶಿಕ್ಷಣಕ್ಕೆ ಬಹು ಸಹಾಯವಾಯಿತು. ಅಸಂಖ್ಯಜನರು ಸುಶಿಕ್ಷಿತರಾದುದಕ್ಕೆ ಹನ್ನೆರಡನೆಯ ಶತಮಾನದಿಂದ ಕನ್ನಡಭಾಷೆಯಲ್ಲಿ ದಿನೇದಿನೇ ವಚನಗ್ರಂಥಗಳು ವೀರಶೈವರಿಂದ ಅತ್ಯಧಿಕವಾಗಿ ರಚಿಸಲ್ಪಡುತ್ತಾ ಬಂದು

ದೇ ದೃಷ್ಟಾಂತವಾಗಿದೆ. ಶ್ರೀಮಾನ್ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯ ಎರಡನೆಯ ಭಾಗದ ೩೧ ನೆಯ ಪುಟದಲ್ಲಿ ಹೇಳಿರುವುದೇನೆಂದರೆ—"೧೫ ನೆಯ ಶತಮಾನದ ಆದಿಭಾಗದಿಂದ ೧೭ ನೆಯ ಶತಮಾನದ ಕೊನೆಯವರೆಗೆ ಬಾಳಿದ ಸುಮಾರು ೩೫೦ ಕವಿಗಳಲ್ಲಿ ೧೬೦ ಮಂದಿ ವೀರಶೈವರಾಗಿದ್ದಾರೆ." ಹಿಂದಣ ೧೩–೧೪ ನೆಯ ಶತಮಾನಗಳಲ್ಲಾದ ಕನ್ನಡ ಕವಿಗಳ ಸಂಖ್ಯೆಯಲ್ಲಿಯೂ ಇದೇಪ್ರಕಾರ ವೀರಶೈವರೇ ಅತ್ಯಧಿಕವಾಗಿದ್ದಾರೆಂದು ಧಾರಾಳವಾಗಿ ಹೇಳಬಹುದು. ಬಸವಣ್ಣನವರಿಂದ ಈ ಪ್ರಕಾರ ಜನಾಂಗದ ಬೌದ್ಧಿಕ ಉನ್ನತಿಯಾದಂತೆಯೇ ಕನ್ನಡ ಸಾಹಿತ್ಯದ ಅಭಿವೃದ್ಧಿಯೂ ಆಯಿತು. ಈ ವಿಷಯವಾಗಿ ಶ್ರೀಯುತ ಆರ್. ನರಸಿಂಹಾಚಾರ್ಯರವರು ತಮ್ಮ ಕವಿಚರಿತೆಯ ಮೊದಲನೆಯ ಭಾಗದ ೯ ನೆಯ ಪುಟದಲ್ಲಿ ಹೇಳಿರುವುದೇನೆಂದರೆ—"ಬಸವ, ಚೆನ್ನಬಸವ, ಸಿದ್ಧರಾಮ ಮೊದಲಾದ ವೀರಶೈವರು ಮತಗ್ರಂಥಗಳನ್ನು ಕನ್ನಡದಲ್ಲಿಯೇ ಬರೆದುದರಿಂದ ಈ ಭಾಷೆಯ ಅಭಿವೃದ್ಧಿಗೆ ಹೆಚ್ಚು ಅವಕಾಶವುಂಟಾಯಿತು."

ಈ ಪ್ರಕಾರ ಯಾವ ಮಹಾತ್ಮರ ಅವತಾರಕೃತ್ಯವು ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಸಾಂಪತ್ತಿಕ, ಬೌದ್ಧಿಕ ಮತ್ತು ಸಾಹಿತ್ಯಗಳ ಅಭಿವೃದ್ಧಿಗೆ ಸಹಾಯವಾಯಿತೋ ಆ ಮಹಾನುಭಾವರಾದ ಬಸವಣ್ಣನವರು ರಾಷ್ಟ್ರೀಯ ಮಹಾಪುರುಷರೆಂದು ಸಿದ್ಧವಾಗುವುದಿಲ್ಲವೇ? ರಾಷ್ಟ್ರೋನ್ನತಿಗೆ ಯಾವಯಾವರೀತಿಯಲ್ಲಿ ಪ್ರಯತ್ನಿಸಬೇಕೆಂದು ಆಧುನಿಕರಾಷ್ಟ್ರಭಕ್ತರು ಈಗ ಹೇಳುತ್ತಿದ್ದಾರೆಯೋ ಅಂತಹ ಅನೇಕ ಸಂಗತಿಗಳನ್ನು ೭೦೦ ವರ್ಷಗಳ ಹಿಂದೆಯೇ ಜನಾಂಗದಲ್ಲಿ ನೆಲೆಗೊಳಿಸಿದ ಈ ರಾಷ್ಟ್ರೋದ್ಧಾರಕರು ನಮಗೆ ಮಾರ್ಗದರ್ಶಿಗಳಲ್ಲವೇ? ಇಂತಹ ಮಹಾವಿಭೂತಿಯನ್ನು ಈ ನಮ್ಮ ಕರ್ನಾಟಕ ಮಾತೆಯು ಹೆತ್ತುದಕ್ಕೋಸ್ಕರ ನಾವು ಈ ಭೂಮಾತೆಗೆ ಅತ್ಯಂತ ಋಣಿಗಳಾಗಿಲ್ಲವೇ? ಆ ಮಹಾತ್ಮರ ಉಪದೇಶದ ಪ್ರಕಾರ ಆಚರಿಸಿ ಈಗ ನಮ್ಮ ಕನ್ನಡ ಮಾತೆಗುಂಟಾಗಿರುವ ನಾನಾ ವಿಪತ್ತುಗಳನ್ನು

ಸ್ವಲ್ಪಮಟ್ಟಿಗಾದರೂ ದೂರಮಾಡುವುದರ ಮೂಲಕ ಆ ಮಾತೃಋಣವನ್ನು ಕಳೆದುಕೊಳ್ಳುವುದು ಮಾತೃಭಕ್ತಿಯುಳ್ಳವರ ಮುಖ್ಯಕರ್ತವ್ಯವಲ್ಲವೇ ?

ಮಹಾ ತಪಸ್ವಿಗಳು, ಜ್ಞಾನಿಗಳು, ವೈರಾಗ್ಯನಿಧಿಗಳು, ಆದ ಶ್ರೀ ಜಾತವೇದಿ ಮುನಿಗಳಿಂದಲು, ಶ್ರೀ ಚೆನ್ನಬಸವಣ್ಣನವರಿಂದಲು, ಶ್ರೀ ಪ್ರಭುದೇವರಿಂದಲು ಧರ್ಮೋಪದೇಶಗಳನ್ನು ಹೊಂದಿದಂತೆಯೇ ನುಡಿದು, ನುಡಿದಂತೆಯೇ ನಡೆದು, ಲೋಕಹಿತಾರ್ಥವಾಗಿಯೇ ತನುಮನ ಪ್ರಾಣಗಳನ್ನು ಸಮರ್ಪಿಸಿ ಶಾಶ್ವತಕೀರ್ತಿಯನ್ನು ಹೊಂದಿದ ಈ ಬಸವಮಹಾತ್ಮನೇ ಧನ್ಯ! ಈ ಮಹಾನುಭಾವನಲ್ಲಿದ್ದ ಅದ್ವಿತೀಯವಾದ ದಯೆಯು, ಅಸಾಧಾರಣವಾದ ಸತ್ಯನಿಷ್ಠೆಯು, ದೃಢತರವಾದ ಲೋಕಹಿತ ಕಾರ್ಯಾಸಕ್ತತೆಯು, ಅಕುಟಿಲವಾದ ಸಮತೆಯು ಮತ್ತು ಲೋಕೋತ್ತರವಾದ ಗುಣಗ್ರಾಹಕತೆಯು ಈ ನಮ್ಮ ಕರ್ನಾಟಕದಲ್ಲಿ ಅತ್ಯಧಿಕವಾಗಿ ಈ ಪಂಚಪರುಷಗಳಿಂದ ಕನ್ನಡಿಗರು ತಮ್ಮ ಇಷ್ಟಾರ್ಥವನ್ನು ಹೊಂದಿ ಹೆಚ್ಚಾದ ಸುಖಶಾಂತಿಗಳಿಂದ ಜೀವಿಸುವ ಸುದಿವಸವು ಶೀಘ್ರದಲ್ಲಿಯೇ ಪ್ರಾಪ್ತವಾಗಲಿ!



ಶ್ರೀ.

# ಬಸವಬೋಧೆ.

(೧) ವೇದಾತೀತ, ಷಡ್ವರ್ಣರಹಿತ, ಅಷ್ಟತ್ರಿಂಶತ್ ಕಳಾತೀತ, ವ್ಯೋಮಾತೀತ, ಅಗಮ್ಯ, ಅಗೋಚರ ಕೂಡಲಸಂಗಮದೇವ.

(೨) ಸಕಲನಿಷ್ಕಲವ ಕೂಡಿಕೊಂಡಿಪ್ಪೆಯಾಗಿ, ಸಕಲನೀನೇ ನಿಷ್ಕಳನೀನೇ ಕಂಡಯ್ಯ. ವಿಶ್ವತೋಚಕ್ಷುನೀನೇ ದೇವ. ವಿಶ್ವತೋಮುಖನೀನೇ ದೇವ. ಕೂಡಲಸಂಗಮದೇವ.

(೩) ಶೃತಿಶತಿ ಶಿರದಮೇಲೆ ಅತ್ಯತಿಷ್ಠದ್ದಶಾಂಗುಲನ ನೇನೆಂಬೆನಯ್ಯ. ಘನಕ್ಕೆ ಘನಮಹಿಮನ, ಮನಕ್ಕಗೋಚರನ, ಅಣೋರಣೀಯಾನ್, ಮಹತೋಮಹೀಯಾನ್, ಮಹಾದಾನಿ ಕೂಡಲಸಂಗಮದೇವ.

(೪) ಅಮೌಲ್ಯನು, ಅಪ್ರಮಾಣನು, ಅಗೋಚರಲಿಂಗವು; ಆದಿಮಧ್ಯಾಂತವಿಲ್ಲದಲಿಂಗವು, ಸ್ವತಂತ್ರಲಿಂಗವು, ನಿತ್ಯನಿರ್ಮಲಲಿಂಗವು, ಅಯೋನಿಸಂಭವನಯ್ಯ. ನಮ್ಮ ಕೂಡಲಸಂಗಮದೇವ.

(೫) ಸ್ವಾಮಿನೀನು, ಶಾಶ್ವತನುನೀನು, ಎತ್ತಿದೆಬಿರಿದು ಜಗವೆಲ್ಲರಿಯಲು, ಮಹಾದೇವ ಮಹಾದೇವ ಇಲ್ಲಿಂದಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ. ಏಕೋದೇವ ಸ್ವರ್ಗ, ಮರ್ತ್ಯ, ಪಾತಾಳದೊಳಗೆ ಒಬ್ಬನೇದೇವ ಕೂಡಲಸಂಗಮದೇವ.

(೬) ಅರಗು ತಿಂದು ಕರಗುವ ದೈವ, ಉರಿಯ ಕಂಡರೆ, ಮುರುಟುವ ದೈವ, ಎಂತು ಸರಿ ಎಂಬೆನಯ್ಯ? ಅವಸರ ಬಂದರೆ, ಮಾರುವ ದೈವವನೆಂತು ಸರಿ ಎಂಬೆನಯ್ಯ? ಅಂಜಿಕೆ ಬಂದರೆ, ಹೂಳುವ ದೈವವನೆಂತು ಸರಿ ಎಂಬೆನಯ್ಯ? ಸಹಜಭಾವ, ನಿಜೈಕ್ಯ, ಸ್ಥಿರರೂಪ, ನಿರ್ವಿಕಾರ, ನಿರಂಜನ ಕೂಡಲಸಂಗಮ ದೇವನೊರ್ವನೇ ದೇವ ಕಾಣಿರೋ.

(೭) ಮಾರಿಕವ್ವೆಯನೆಂತು ಕೊರಳಲ್ಲಿ ಕಟ್ಟಿಕೊಂಬರು ? ಸಾಲ ಬಂದರೆ ಮಾರಿಕೊಂಡುತಿಂಬರು. ಸಾಲಬಂದರೆ ಒತ್ತಿಯನಿಟ್ಟುಕೊಂಬರಯ್ಯ. ಮಾರುವೋಗ ನೊತ್ತೆವೋಗ ನಮ್ಮ ಕೂಡಲ ಸಂಗಮದೇವ.

(೮) ಉಣಲುಡಲು ಮಾರಿಕವ್ವೆಯಲ್ಲದೆ ಕೊಲ್ಲಲು ಕಾಯಲು ಮಾರಿಯೇ ? ತನ್ನ ಮಗನ ಜವನೊಯ್ವಲ್ಲಿ, ಅದೆತ್ತ ಹೋದಳೋ ಮಾರಿಕವ್ವೆ ? ಇವ ಕಾವರೇ ? ನಮ್ಮ ಕೂಡಲಸಂಗಯ್ಯನಲ್ಲದೆ, ಮತ್ತೊಂದು ದೈವವಿಲ್ಲ, ದೈವವಿಲ್ಲ.

(೯) ಮಡಿಕೆಯೇ ದೈವವು, ಮರದಲ್ಲಿಯ ದೈವವು, ಬೀದಿಯ ಕಲ್ಲೇ ದೈವವು, ಹಣತೆ ದೈವವು, ಬಿಲ್ಲುನಾರಿ ದೈವವು ಕಾಣಿರಯ್ಯ. ಕೊಳಗವೇ ದೈವವು † ಗಿಣಿಲು ದೈವವು, ಕಾಣಿರಯ್ಯ. ದೈವ ದೈವವೆಂದು ಕಾಲಿಡಲಿಂಬಿಲ್ಲವು. ದೇವನೊಬ್ಬನೇ ಕೂಡಲಸಂಗಮದೇವ.

(೧೦) ಶ್ರೀಗುರು ಪ್ರಾಣಲಿಂಗವನು ಕರತಳಾಮಳಕವ ಮಾಡಿ ಕರಸ್ಥಲಕೆತಂದು ಕೊಟ್ಟನಾಗಿ ಒಳಗೆನ್ನದೆ ಹೊರಗೆನ್ನದೆ ಆ ಲಿಂಗವನಚ್ಚಿಮಚ್ಚಿ ಹರುಷದೊಳೋಲಾಡುವೆ ಅದೆಂತೆಂದೊಡೆ, "ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ, ನಾದಬಿಂದುಕಳಾತೀತಂ, ಗುರುಣಾಲಿಂಗ ಮುದ್ಭವಂ" ಇಂತೆಂದುದಾಗಿ, ಮಹಾಘನಲಿಂಗವ ಪಡೆದು ಆನಂದಿಸುವೆ ಕೂಡಲಸಂಗಮದೇವ.

(೧೧) ವೇದವೇದಾಂತಂಗಳಿಗೆ ಅಸಾಧ್ಯವಾದ ಅನುಪಮಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ. ನಾದಬಿಂದು ಕಳೆಗಳಿಗಭೇದ್ಯವಾದ ಅಚಲಿತಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ. ವಾಙ್ಮನಕ್ಕಗೋಚರವಾದ ಅಖಂಡಿತಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ. ಇನ್ನು ನಾನು ಬದುಕಿದೆನು. ನಾ ಬಯಸುವ ಬಯಕೆ ಕೈಸಾರಿತೆಂದು ಕೂಡಲಸಂಗಮದೇವ.

---

† ಈ ಗುರುತುಳ್ಳ ಶಬ್ದಗಳ ಅರ್ಥವು ಅಲ್ಲಿಯಸಂದರ್ಭಕ್ಕನುಸರಿಸಿ ಕೊನೆಯಲ್ಲಿ ಬರೆಯಲ್ಪಟ್ಟಿದೆ.

(೧೨) ಸಗಣೆಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ, ರಂಜನೆಯುಹುದಲ್ಲದೆ ಅದರ † ಗಂಜಳ ಬಿಡದಣ್ಣಾ. ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ, ನಿಚ್ಚ ನಿಚ್ಚ ಕೆಸರಹುದಲ್ಲದೆ, ಅದರಚ್ಚುಗ ಬಿಡದಣ್ಣಾ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ, ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವ.

(೧೩) ಭಕ್ತನೆನಿಸುವೆನಯ್ಯ ಮೆಲ್ಲ ಮೆಲ್ಲಗೆ. ಯುಕ್ತನೆನಿಸುವೆನಯ್ಯ ಮೆಲ್ಲ ಮೆಲ್ಲನೆ. ಪಾರಿಶರಣ ನೆನಿಸುವೆನಯ್ಯ ಮೆಲ್ಲ ಮೆಲ್ಲನೆ. ಎಡಹುವ ಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯ. ಕೂಡಲ ಸಂಗಮದೇವ. ನಿಮ್ಮಿಂದಧಿಕನೆನಿಸುವೆನಯ್ಯ.

(೧೪) ದೇವಲೋಕ ಮರ್ತ್ಯಲೋಕವೆಂಬುವು ಬೇರಿಲ್ಲ ಕಾಣಿರೋ. ಸತ್ಯವನುಡಿವುದೇ ದೇವಲೋಕ. ಅಸತ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ. ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣು ಕೂಡಲಸಂಗಮದೇವ.

(೧೫) ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಣ್ಣಾ ಎರಡಾಳಿನ ಭಾಷೆಯ ? ಕೊಲುವೆನೆಂಬ ಭಾಷೆದೇವನದು, ಗೆಲುವೆನೆಂಬ ಭಾಷೆ ಭಕ್ತನದು. ಸತ್ಯವೆಂಬ † ಕೂರಲಗನೇ ಕಳೆದುಕೊಂಡು, ಸದ್ಭಕ್ತರುಗೆದ್ದರು ಕಾಣಾ ಕೂಡಲ ಸಂಗಮದೇವ.

(೧೬) ದಿಟವ ನುಡಿವುದು. ನುಡಿದಂತೆ ನಡೆವುದು. ಹುಸಿಯ ನಡೆದು ತಪ್ಪುವ ಪ್ರಪಂಚೆಯನೊಲ್ಲ ಕೂಡಲ ಸಂಗಮದೇವ.

(೧೭) + ತೊರೆಯ ಮಾವಣ್ಣಗಳಿರಾ, ತೊರೆಯಿರೋ ಪರಧನವ ! ಪರದ್ರವ್ಯವ ಬಿಡದೆ ಹೋಗಿ ತೊರೆಯಲ್ಲಿ + ಮಿಂದರೆ, ಆ ತೊರೆಯಲ್ಲಾ ಬರುದೊರೆಕಂಡಯ್ಯ ! ಕಳವ ತೊರೆದು ಮಿಂದರೆ, ಒಲಿದು ಕೂಡಿಕೊಂಬ ನಮ್ಮ ಕೂಡಲ ಸಂಗಮದೇವ.

(೧೮) ಕುಳಿತುಲಿಂಗವ ಪೂಜಿಸಿ, ಅಲ್ಲದಾಟವ ನಾಡುವರಯ್ಯ ! ಬೆಳ್ಳತ್ತಿನ ಮರೆಯಲ್ಲಿ ಹುಲ್ಲೆಗಂಬ ತೊಡುವಂತೆ + ಲೋಗ ರರ್ಥವ ಕುವಳ ಕಳ್ಳರಕಯ್ಯ ಪೂಜೆಯನೊಲ್ಲ ನೋಡಾ ನಮ್ಮ ಕೂಡಲ ಸಂಗಮದೇವ.

(೧೯) ತನಗೆ ಮುನಿವರಿಗೆ ತಾಮುನಿಯಲೇಕಯ್ಯ ? ಅವರಿಗಾದಡೆದೇನು ? ತನಗಾದಡೇನು ? ತನುವಿನಕೋಪ ತನ್ನ ಹಿರಿಯ ತನದ ಕೇಡು. ಮನದಕೋಪ ತನ್ನ ಅರುವಿನಕೇಡು. ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ, ನೆರೆಮನೆ ಬೇವುದೇ ಕೂಡಲ ಸಂಗಮದೇವ. ?

(೨೦) ಕಾಣದ ಠಾವಿನಲ್ಲಿ ಜರಿದರೆ ಕೇಳಿ ಪರಿಣಾಮಿಸ ಬೇಕು. ಅದೇನು ಕಾರಣ ? ಕೊಳ್ಳದೆ ಕೊಡದದೆ, ಅವರಿಗೆ ಸಂತೋಷವ ಹುದಾಗಿ ಎನ್ನಮನದ ತದ್ವೇಷವಳಿದು, ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂಡಲ ಸಂಗಮದೇವ.

(೨೧) ಹರಿವ ಹಾವಿಗಂಜೆ, ಉರಿಯ ನಾಲಿಗೆಗಂಜೆ, ಸುರಿ ಗೆಯಮೊನೆಗಂಜೆ ಒಂದಕ್ಕಂಜುವೆ ನೊಂದಕ್ಕಳುಕುವೆ. ಪರಸ್ತ್ರೀ ಎಂಬ ಜೂಜಿಂಗಂಜುವೆ. ಮುನ್ನಂಜದ ರಾವಣನೇ ಏಧಿಗೊಳಗಾದ ! ಅಂಜುವೆ ನಯ್ಯ ಕೂಡಲ ಸಂಗಮದೇವ.

(೨೨) ನೋಡಲಾಗದು ನುಡಿಸಲಾಗದು. ಪರಸ್ತ್ರೀಯರಬೇಟ ಬೇಡಕಾಣಿರೋ. ತಗರ ಬೆನ್ನಿನಲ್ಲಿ ಹರಿವ + ಸೊಣಗನಂತೆ ಬೇಡಕಾಣಿ ರೋ. ಒಂದಾಸೆಗೆ ಸಾಸಿರ ವರುಷ ನರಕದಲ್ಲಿಕ್ಕುವ ಕೂಡಲ ಸಂಗಮ ದೇವಯ್ಯ.

(೨೩) ಕಾಗೆ ಒಂದಗಳು ಕಂಡರೆ ಕರೆಯದೇ ತನ್ನ ಬಳಗವನೆಲ್ಲ ವನು ? ಕೋಳಿ ಒಂದು ಗುಟುಕ ಕಂಡರೆ, ಕರೆಯದೇ ತನ್ನ ಕುಲವನೆಲ್ಲ ವನು ? ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ, ಕಾಗಿ ಕೋಳಿಗಿಂತ ಕರಕಷ್ಟ, ಕೂಡಲ ಸಂಗಮದೇವ

(೨೪) ಆಯುಷ್ಯ ಉಂಟು. ಪ್ರಳಯವಿಲ್ಲೆಂದು ಅರ್ಥವ + ಮಡಗು ಏರಿ. ಆಯುಷ್ಯತೀರಿ, ಪ್ರಳಯಬಂದರೆ, ಆ ಅರ್ಥವ ನುಂಬುವರಿಲ್ಲ. ನೆಲ ನನಗದು ಮಡಗದಿರಾ, ನೆಲಸುಂಗಿದರುಗುಳುವುದೇ ? ಕಣ್ಣಿನಲ್ಲಿನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ ಹೋಗದಿರಾ ! ನಿನ್ನ ಮಡದಿಗಿರಲೆಂದರೆ, ನಿನ್ನ ಮಡದಿಯ ಕೃತಕ ಬೇರೆ. ನಿನ್ನ ಒಡಲು ಕೆಡೆಯಲು, ಮತ್ತೊಬ್ಬ ನಲ್ಲಿಗೆ ಆದಕದೆ ಮಾಣ್ಬಳೇ ? ಹೆರರಿಗಿಕ್ಕ ಹೆಗ್ಗುರಿಯಾಗಿ ಕೆಡಬೇಡ. ಕೂಡಲ ಸಂಗಮನ ಶರಣರಿಗೆ ಒಡವೆಯ ಸವಿಸುವದು.

(೨೫) ಸಂಸಾರವೆಂಬುದೊಂದು ಗಾಳಿಯ + ಸೊಡರು. ಸಿರಿ ಯೆಂಬುದೊಂದು ಸಂತೆಯಮಂದಿ ಕಂಡೆಯ್ಯ. ಇದನುನೆಚ್ಚಿ ಕೆಡಬೇಡ. ಸಿರಿಯೆಂಬುದ ಮರೆದು, ಪೂಜಿಸು ನಮ್ಮ ಕೂಡಲಸಂಗಮದೇವನ.

(೨೬) ಎಲೆ ಎಲೆ ಮಾನವ, ಅಳಿಯಾಸಬೇಡಲೋ ಕಾಡ ಬೆಳದಿಂಗಳ ಸಿರಿಯು ಸ್ಥಿರವಲ್ಲ. ಕೇಡಿಲ್ಲದ ಪದವಿಯ ಕೊಡಲು, ಕೂಡಲಸಂಗಮದೇವನ ಮರೆಯದೆ ಪೂಜಿಸು.

(೨೭) ಹರನೀವಕಾಲಕ್ಕೆ ಸಿರಿಯು ಬೆನ್ನಲ್ಲಿ ಬಕ್ಕುಂ. ಹರಿದು ಹೆದ್ದೊರೆಯುಕೆರೆ ತುಂಬಿದಂತಯ್ಯಾ. ನೆರೆಯದ ವಸ್ತು ನೆರೆವುದು ನೋ ಡಯ್ಯ. ಅರಸು ಪರಿವಾರ ಕೈವಾರ ನೋಡಯ್ಯಾ. ಪರಮನಿರಂಜನನು ಮರೆವ ಕಾಲಕ್ಕೆ ತುಂಬಿದ ಹರವಿಯ ಕಲ್ಲು ಕೊಂಡಂತೆ ಕೂಡಲ ಸಂಗಮ ದೇವ.

(೨೮) ಕಾಂಚನವೆಂಬ ನಾಯನೆಚ್ಚಿ, ನಿಮ್ಮನು ನಾನು ಮರೆದೆ ನಯ್ಯ. ಕಾಂಚನಕ್ಕೆ ವೇಳೆಯಲ್ಲದೆ, ಲಿಂಗಕ್ಕೆ ವೇಳೆಇಲ್ಲ. + ಹಡಿಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೆ ಕೂಡಲಸಂಗಮದೇವ.?

(೨೯) ಎನ್ನ ನಡೆಯೊಂದುಪರಿ. ಎನ್ನೊಳಗೇನು ಶುದ್ಧವಿಲ್ಲ ನೋಡಯ್ಯ ನುಡಿಗೆತಕ್ಕ ನಡೆಕಂಡರೆ, ಕೂಡಲ ಸಂಗಮದೇವ ನಿಮ್ಮೊಳಗಿಪ್ಪ ನಯ್ಯ.

(೩೦) ಎರಡೆಲೆಯಂತೆ ಒಳಗೊಂದು ಹೊರಗೊಂದಾದರೆ, ಮೆಚ್ಚುವನೇ ಶಿವನು? ಬಾರದಭವಂಗಳಲ್ಲಿ ಬರಿಸುವನಲ್ಲದೆ, ಮೆಚ್ಚುವನೇ? ಅಘೋರನರಕವ ನುಣಿಸುವನಲ್ಲದೆ ಮೆಚ್ಚುವನೇ? ಉಡುಹಿನ ನಾಲಿಗೆಯಂತೆ ಎರಡಾದರೆ, ಕೂಡಲಸಂಗಯ್ಯ ಮೆಚ್ಚುವನೇ?

(೩೧) ಒಲಿಯಬೂದಿಯು ಬಳಿಯಲುಬೇಡ, ಒಲಿಯಂತೆ + ಹೂಸಿಕೊಂಡಿಪ್ಪುದು ಹುಸಿ ಏನುಫಲ, ಮನದಲ್ಲಿ ಲೇಸಿಲ್ಲದನ್ನಕ? ಒಂದ ನಾಡಹೋಗಿ ಒಂಬತ್ತನಾಡುವ ಡಂಭಕರ ಮೆಚ್ಚ ಕೂಡಲಸಂಗಮದೇವ.

(೩೨) ಹುತ್ತವ ಬಡಿದರೆ ಹಾವು ಸಾಯಬಲ್ಲುದೇನಯ್ಯ? ಅಘೋರತಪವ ಮಾಡಿದಡೇನು? ಅಂತರಂಗ ಆತ್ಮಶುದ್ಧವಿಲ್ಲದವರನೆಂತು ನಂಬುವನಯ್ಯ ಕೂಡಲಸಂಗಮದೇವ?

(೩೩) ಪುಣ್ಯಪಾಪಂಗಳೆಂಬವು ತಮ್ಮ ಇಷ್ಟವು ಕಂಡಿರಯ್ಯ! "ಅಯ್ಯಾ" ಎಂದಡೆ ಸ್ವರ್ಗ. "ಎಲವೋ" ಎಂದಡೆ ನರಕ. "ದೇವ ಭಕ್ತ, ಜಯಜಯ" ಎಂಬ ನುಡಿಯೊಳಗೆ ಕೈಲಾಸವೈದುದು ಕೂಡಲಸಂಗಮದೇವ.

(೩೪) "ಬನ್ನಿ, ಬಂದಿರಿ, + ಹದುಳವಿದ್ದಿರಿ," ಎಂದರೆ ನಿಮ್ಮ ಮೈಸಿರಿಹಾರಿಹೋಹುದೇ? "ಕುಳ್ಳಿರಿ" ಎಂದರೆ ನೆಲ ಉರುಳಿ ಹೋಹುದೇ? ಒಡನೆನುಡಿದರೆ, ಶಿರಹೊಟ್ಟೆಯೊಡೆವುದೇ? ಕೊಡಲಿಲ್ಲದಿದ್ದರೂ ಈ ಯೊಂದು ಗುಣವಿಲ್ಲದಿದ್ದರೆ, ಮೂಗ ಕೊಯ್ಯದೆ ಮಾಣ್ಬನೇ ಕೂಡಲಸಂಗಮಯ್ಯ?

(೩೫) ಕಂಡ ಭಕ್ತಂಗೆ ಕೈಮುಗಿವಾತನೇ ಭಕ್ತ. ಮೃದುವಚನಂಗಳೇ ಸಕಲಜಪಂಗಳಯ್ಯ. ಮೃದುವಚನಂಗಳೇ ಸಕಲತಪಂಗಳಯ್ಯ. ಸದುವಿನಯವೇ ಸದಾಶಿವನ ಒಲುಮೆಯಯ್ಯ ಕೂಡಲಸಂಗಮದೇವಯ್ಯನಂತಲ್ಲದೊಲ್ಲನಯ್ಯ.

(೩೬) "ಇತ್ತಬಾರಯ್ಯಾ, ಇತ್ತಬಾರಯ್ಯಾ," ಎಂದು ಭಕ್ತರೆಲ್ಲರೂ ಕರ್ತೃ ಹತ್ತೆಕರೆವುತ್ತಿರಲು ಮತ್ತೆ ಕೆಲಕ್ಕೆ ಹೋಗಿ, ಶರಣೆಂದು ಹಸ್ತ ಬಾಯನೇಮೆಚ್ಚಿ, ಕಿರಿದಾಗಿ ಭೃತ್ಯಾಚಾರವನುಡಿದು, ವಿನಯಧ್ಯಾನ ಉಳ್ಳರೆ, ಎತ್ತಿಕೊಂಬನಯ್ಯ ಕೂಡಲಸಂಗಮದೇವ, ಪ್ರಮಥರ ಮುಂದೆ.

(೩೭) ಎನಗೆ ನಾನೇ ಹಗೆ ನೋಡಯ್ಯಾ! ಎನಗೆ ನಾನೇ+ ಕೆಳನೋಡಯ್ಯಾ! ನಿಮ್ಮ ಸದ್ಭಕ್ತರೊಡನೆ ವಿರೋಧವ ಮಾಡಿದರೆ, ಎನ್ನ ಕೊಲುವುದಾಗಿ, ನಿಮ್ಮ ಪುರಾತನರಿಗಂಜಿ ಬೆಸಗೊಂಡಡೆ, ಎನ್ನ ಕಾಯ್ವುದಾಗಿ, ಅನ್ಯರು ಹಗೆಯಲ್ಲ, ಕೆಳೆಯಲ್ಲ. ಬಾಗಿದತಲೆಯ, ಮುಗಿದಕಯ್ಯಾಗಿರಿಸು, ಕೂಡಲಸಂಗಮದೇವ.

(೩೮) ಅವರಿವರೆನ್ನದೆ ಚರಣಕ್ಕೆರಗಲು, ಅಯ್ಯ ತನುವೇರಿ ಬೆಬ್ಬನೆ ಬೆರೆವೆನಾನು. + ಕೆಚ್ಚು ಬೆಳೆಯಿತಯ್ಯಾ! ಆ ಕೆಚ್ಚಿಂಗೆ ಕಿಚ್ಚನಿಕ್ಕಿ, ಬೆಳ್ಳುತನವಮಾಡಿ, ಬೆಳಗಾರದಂತೆ ಮಾಡು ಕೂಡಲಸಂಗಮದೇವ.

(೩೯) ಅರಸರಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯ. ತಾರೌ + ಅಗ್ಗವಣಿಯ, ನೀಡೌ ಪತ್ರೆಯಲಿಂಗಕ್ಕೆ + ಬೋನವ ಹಿಡಿಯೌ ಎಂಬರು. ಕೂಡಲಸಂಗನ ಶರಣರ ಮಹಾಮನೆಯಲ್ಲಿ + ಒಕ್ಕುದನುಣ್ಣೌ ತೊತ್ತೇ. ಎಂಬರು.

(೪೦) ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರು, ಎನ್ನ ಹೊಗಳಿಹೊಗಳಿ ಎನ್ನ ಹೊಗಳತೆ ಎನ್ನ ಮೈಗೊಂಡಿತಲ್ಲಾ! ಅಯ್ಯಾ ನಿಮ್ಮ ಮನ್ನಣೆಯೇ + ಮಸೆದಲಗಾಗಿ ತಾಗಿತ್ತಲ್ಲಾ! ಅಯ್ಯಾ, ನೊಂದೆನು, ಸೈರಿಸಲಾರೆನು. ಕೂಡಲಸಂಗಮದೇವ, ನೀವೆನಗೊಳ್ಳಿದನಾದರೆ, ಎನ್ನ ಹೊಗಳತೆಗಡ್ಡಬಾರಾ, ಧರ್ಮಿ.

(೪೧) ಮರದನೆಳಲಲ್ಲಿದ್ದು, ತನ್ನನೆಳಲ ನರಸಬಹುದೇ ? ನಿಮ್ಮ ಶರಣರಮುಂದೆ ನಾನೇತರಯುಕ್ತನಯ್ಯಾ ? ಅನುಭಕ್ತನೆಂಬ ನುಡಿಸುಡದೆ ಕೂಡಲಸಂಗಮದೇವ ?

(೪೨) ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ, ಆಡು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೇ ? ಸಂಗನ ಶರಣರಿಗೆ ಅನುಸರಿಯೇ ಹೇಳಾ ಕೂಡಲಸಂಗಮದೇವ.

(೪೩) ಅನುಭಕ್ತನಲ್ಲಯ್ಯ. ಅನುವೇಷಧಾರಿಯಯ್ಯ. ಕಟುಕ, ಕೆತ್ತುಗ, ಕೊಲ್ಲುಗನೆಂಬುದು ಎನ್ನ ಹೆಸರಯ್ಯ. ಕೂಡಲಸಂಗಮದೇವ, ನಿಮ್ಮ ಶರಣರಮನೆಯ ಮಗ ನಾನಯ್ಯ.

(೪೪) ಡಂಬು ಡಳ್ಳು ಎನ್ನದಯ್ಯ. ಡಂಬಕನೆಂಬುವ ನಾನಯ್ಯ, ನಿಮ್ಮ ನಂಬಿದ ಶರಣರ + ಡಿಂಗರಿಗ ನಾನು ಕೂಡಲಸಂಗಮದೇವ.

(೪೫) ಎಲ್ಲಿ ನೋಡಿದಲ್ಲಿ ಮನವೆಳಸಿದಡೆ ಆಣೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿ ಎಂದು ಕಾಂಬೆನು ಕೂಡಲಸಂಗಮದೇವ.

(೪೬) ಗಂಡ ಶಿವಲಿಂಗದೇವರ ಭಕ್ತ. ಹೆಂಡತಿ ಕೊಂಬುದು ಸುರೆಯಮಾಂಸ. + ಭಾಂಡ ಭಾಜನ ಶುದ್ಧಿ ಇಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ ಕೂಡಲಸಂಗಮದೇವ.

(೪೭) ಅಯ್ಯ, ಮರ ಮರಮಥನದಿಂದೆ ಅಗ್ನಿಹುಟ್ಟಿ, ಆ ಮರನೆಲ್ಲವ ಸುಡದಿಪ್ಪುದೇನಯ್ಯ ? ಮಹಾನುಭಾವರ ಘನಮಥನದಿಂದ ಜ್ಞಾನಾಗ್ನಿ ಪುಟ್ಟಿ, ಎನ್ನ ತನುಗುಣ ಎನ್ನ ಮನಗುಣ ನಾಸ್ತಿ. ಎನ್ನ ಪ್ರಾಣಗುಣಂಗಳು ಸುಡದಿಪ್ಪವೇ ಅಯ್ಯ ? ಇದು ಕಾರಣ ಕೂಡಲಸಂಗಮದೇವ, ನಿಮ್ಮ ಮಹಾನುಭಾವರ ಸಂಗವನೆ ಕರುಣಿಸಯ್ಯ.

(೪೮) ಮಡಿಕೆಯ ಮಾಡುವರೆ, ಮಣ್ಣೇ ಮೊದಲು. ತೊಡಿಗೆಯ ಮಾಡುವರೆ, ಹೊನ್ನೇ ಮೊದಲು. ಶಿವಪಥವ ನರಿವಡೆ, ಗುರುಪಥವೇ ಮೊದಲು. ಕೂಡಲಸಂಗಮದೇವರ ನರಿವಡೆ, ಶರಣರ ಸಂಗವೇ ಮೊದಲು.

(೪೯) ಕಾಮವ ಸುಡಿದಾತ, ಹೇಮವ ಜರಿದಾತ, ಭಾನುವಿನ ಉದಯಕ್ಕೆ ಒಳಗಾಗದಾತ ಶರಣನು. ಆವಾಗಳು ನಿಮ್ಮ ಮಾಣದೆ ನೆನೆವರ ಮನೆಯಲ್ಲಿ ಶ್ವಾನನಾಗಿರಿಸು ಮಹಾದಾನಿ ಕೂಡಲಸಂಗಮದೇವ.

(೫೦) ಸೂರ್ಯನುದಯ ತಾವರೆಗೆ ಜೀವಾಳ. ಚಂದ್ರಮನುದಯ ನೈದಿಲೆಗೆ ಜೀವಾಳ. + ಕೂಪರ ಠಾವಿನಲ್ಲಿ ಕೂಟ ಜೀವಾಳ. ಒಲಿದ ಠಾವಿನಲ್ಲಿ ನೋಟವೇ ಜೀವಾಳ. ಕೂಡಲಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯ.

(೫೧) + ಹೊಲಬುಗೆಟ್ಟ ಶಿಶುವು ತನ್ನ ತಾಯನರಸುವಂತೆ, + ಬಟ್ಟೆದಪ್ಪಿದ ಕರು ತನ್ನ ಹಿಂಡ ಹಾನಗಸುವಂತೆ, ಬಯಸುತಿರ್ದೆನಯ್ಯ ನಿಮ್ಮ ಶರಣರ ಬರವನು. ದಿನಕರನುದಯಕ್ಕೆ ಕಮಲ ವಿಕಸಿತವಾದಂತೆ, ಎನಗೆ ನಿಮ್ಮ ಶರಣರ ಬರವು ಕೂಡಲಸಂಗಮದೇವ.

(೫೨) ಪರತತ್ವದ ನಿಜಸಂಯುಕ್ತರ ಅನುನೀನೆನ್ನದಿಹ ಶಬ್ದಸುಖಿಗಳ ತೋರಾ ಎನಗೆ. ಮಹಾನುಭಾವರ ತೋರಾ ಎನಗೆ, ಲಿಂಗವೇ. ಲಿಂಗೈಕ್ಯರಲಿಂಗ ಸುಖಿಗಳಲಿಂಗ ಗೂಡಾಗಿಪ್ಪರ ಲಿಂಗಾಭಿಮಾನಿಗಳ ತೋರಾ ಎನಗೆ. **ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು** ಕೂಡಲಸಂಗಮದೇವ.

(೫೩) ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಭಕ್ತರಾಣೆ, ಅಡಿಗಡಿಗೆ ಗುರುವಿನಾಣೆ ಎಂಬ ವಚನ + ಹೊಲ್ಲ. ಅವರು ಮುಂದೆ ಪದಕ್ಕೆ ಸಲ್ಲರು. ಆದಿಯಿಂದ ಬಂದ ವಚನವೆಂದು ಮುಂದೆ ಶರಣರ ಕೂಡೆ ಸರಸವ ನಾಡಿದರೆ, ದ್ರೋಹತಪ್ಪದು. ನಗುತಲಿಂದುಕೊಂಡರೆ. ಅಲಗುನಡದಿಹುದೇ ಕೂಡಲಸಂಗಮದೇವ ?

(೫೪) ಹಾವಿನ ಹೆಡೆಯಕೊಂಡು ಕೆನ್ನೆಯ ತುರಿಸಿಕೊಂಬಂತೆ, ಉರಿಯ ಕೊಳ್ಳಿಯಕೊಂಡು + ಮಂಡಿಯಸಿಕ್ಕು ಬಿಡಿಸುವಂತೆ, ಹುಲಿಯ ಮೀಸೆಯ ಹಿಡಿದುಕೊಂಡು ಉಯ್ಯಾಲೆಯ ನಾಡುವಂತೆ, ಕೂಡಲಸಂಗನ

(೫೫) ಸಾರಸಜ್ಜನರ ಸಂಗ ಲೇಸು ಕಂಡಯ್ಯಾ, ದುರುಳ ದುರ್ಜನರ ಸಂಗವದು ಭಂಗವಯ್ಯ,ಸಂಗವೆರಡುಂಟು, ಒಂದುಬಿಡುವದು. ಹಿಡಿಮಂಗಳಮೂರ್ತಿ ನಮ್ಮ ಕೂಡಲಸಂಗಮಶರಣರ.

(೫೬) ದೂಷಕನೊಬ್ಬ ದೇಶವ ಕೊಟ್ಟರೆ. ಆರೆಮಾಸಿ ಅವನ+ ಹೊರೆಯಲ್ಲಿರಬೇಡ, ಮಾದರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗಿರ್ಪುದುಕರಲೇಸಯ್ಯ, ತೊತ್ತಾಗಿರ್ಪುದು ಕರಲೇಸಯ್ಯಾ, ಕಾಡಕೊಪ್ಪತಂದು ಒಲೆಯಲ್ಲಿ ಹುರಿದಿಟ್ಟುಕೊಂಡಿಪ್ಪುದೀಗನಮ್ಮ ಕೂಡಲಸಂಗನಶರಣರು.

(೫೭) ಹೊಲೆಯ+ ಹೊಲಬಿಗನಾದೊಡೆ, ಆತನ ಹೊರೆಯಲ್ಲಿಪ್ಪುದು ಲೇಸುಕಂಡಯ್ಯ. ಹೊಲಬುಗೆಡದೆ, ಲಿಂಗಶರಣೆನ್ನಿರಯ್ಯ. ಹೊಲಬುಗೆಡಬೇಡ ಶಿವಶರಣೆನ್ನಿರಯ್ಯ, ನಮ್ಮ ಕೂಡಲಸಂಗನ ಮಹಾಮನೆಯಲ್ಲಿ ಮಾದಾರ ಚನ್ನಯ್ಯಾ ಹೊಲಬಿಗನಯ್ಯ.

(೫೮) ಜ್ಞಾನದ ಬಲದಿಂದ ಅಜ್ಞಾನ ಕೆಡುವುದು ನೋಡಯ್ಯ ಜ್ಯೋತಿಯಬೆಳಗಿಂದ್ಕತ್ತಲೆ ಕೆಡುವುದು ನೋಡಯ್ಯ ಪರುಷದ ಬಲದಿಂದ ಅವಲೋಹ ಕೆಡುವುದು ನೋಡಯ್ಯ, ಕೂಡಲಸಂಗಮದೇವಯ್ಯ, ನಿಮ್ಮ ಅನುಭಾವಿಗಳ ಸಂಗದಿಂದ ಎನ್ನಭವ ಕೆಡುವುದು ನೋಡಯ್ಯ.

(೫೯) ಒಡೆಯರಿಲ್ಲದ ಮನೆಯ+ ಶುಡುಗುಣಿನಾಯ ಹೊಗುವಂತೆ, ನೀನಿಲ್ಲದವರ ಮನೆಯ ಹೊಗೆನು, ಸಂಗಯ್ಯ ಶ್ವಪಚೋವಿಗಳಾಗಲಿ, ಕೂಡಲಸಂಗಯ್ಯ ನೀನಿದ್ದವನೇಕುಲಜನು.

(೬೦) ಹಲವುಕಾಲ ಹಂಸನಸಂಗವಿದ್ದರೇನೋ, ಬಕಶುಚಿಯಾಗಬಲ್ಲುದೇ ? ಕಲ್ಪತರುವಿನ ಸಂಗವಿದ್ದರೇನೋ, ಕೊರಡು+ ಕೊನರಾಗಿ ಫಲಿಸುವದೇ ? ಗಂಗಾನದಿಯೊಳಗೆ ಪಾಷಾಣವಿದ್ದರೇನೋ, ಮೃದುವಾಗಬಲ್ಲುದೇ ? ಕಾಶೀಕ್ಷೇತ್ರದಲ್ಲಿ ಶುನಕವಿರ್ದರೇನೋ, ಅದರ ಕ್ಷೀರಪಂಚಾಮೃತಕ್ಕೆ ಸಲುವುದೇ ? ತೀರ್ಥದಲ್ಲಿ ಗಾರ್ದಭವಿದ್ದರೇನೋ, ಕಾರಣಿಕ

ನಾಗಬಲ್ಲುದೇ ? ಖಂಡುಗಹಾಲೊಳಗೆ ಒಂದು ಇದ್ದಲೆ ಇದ್ದರೇನೋ, ಬಿಳುಪಾಗಬಲ್ಲುದೆ ? ಕೂಡಲಸಂಗಮದೇವ ನಿಮ್ಮ ಶರಣರ ಸಂಗವಿದ್ದಡೇನೋ ಅಸಜ್ಜನನು ಸದ್ಭಕ್ತನಾಗಬಲ್ಲನೇ ?

(೬೧) ಆಡಿ + ಅಳುಪದಿರಾ. ಲೇಸಮಾಡಿಮರುಗದಿರಾ, ಎಲೆ ಮನವೇ, ಕೊಡಿತಪ್ಪದಿರಾ, ಬೇಡಿದವರಿಗೆ ನೀನಿಲ್ಲೆನ್ನದಿರು ಕಂಡೆಯಾ ನಾಡಮಾತುಬೇಡ ಸೆರೆಗೊಡ್ಡಬೇಡು, ಕೂಡಲಸಂಗಯ್ಯನಶರಣರ.

(೬೨) ಕೆಡೆನಡೆಯದೆ, ಕೆಡೆನುಡಿಯದೆ, ಅನ್ಯವನು ಪ್ರತಿಪಾದಿಸದೆ ಇರ್ದಡೆ ಏನುಕೊಡನಯ್ಯಲಿಂಗವು ! ತಾನೇನಬೇಡಿದ್ದನೀವನಾಗಿ, ನಂಬುಗೆಯುಳ್ಳಶಿವಭಕ್ತಂಗೆ ಇದೆ ಲಭ್ಯ ಕೂಡಲಸಂಗಮದೇವ.

(೬೩) ಅರ್ಥವಡಗದು, ಕ್ರೋಧ ತೊಲಗದು, ಕ್ರೂರಕುಹಕ, ಕುಭಾಷೆಬಿಡದನ್ನಕ್ಕರ, ನೀನೆತ್ತ, ಶಿವನೆತ್ತ, ಹೋಗತ್ತ ಮರುಳೇ, ಭವರೋಗವೆಂಬ ತಿಮಿರ ತಿಳಿಯದನ್ನಕ್ಕರ, ಕೂಡಲಸಂಗಯ್ಯನೆತ್ತ, ನೀನೆತ್ತ ಮರುಳೇ ?

(೬೪) ಆತ್ಮಸ್ತುತಿ ಪರನಿಂದೆಯ ಕೇಳಿಸದಂತೆ ಇರಿಸಯ್ಯ ನಿಮ್ಮ ಧರ್ಮ. ಆನುಭಕ್ತ, ಎನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ, ನಿಮಗಾನುದ್ರೋಹಿಯಯ್ಯ ಕೂಡಲಸಂಗಮದೇವ, ನಿಮ್ಮ ಶರಣರಲೇಸೇ ಎನ್ನ ಲೇಸಯ್ಯ.

(೬೫) ನುಡಿದರೆ ಮುತ್ತಿನಹಾರದಂತಿರಬೇಕು. ನುಡಿದರೆ, ಲಿಂಗ ಮೆಚ್ಚು ಅಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ, ಕೂಡಲ ಸಂಗಮದೇವನೆಂತೊಲಿವನಯ್ಯ.

(೬೬) ಕಾಮವೇಕೋ ಲಿಂಗಪ್ರೇಮಿ ಎನಿಸುವಂಗೆ ? ಕ್ರೋಧವೇಕೋ ಶರಣವೇದ್ಯನೆನಿಸುವಂಗೆ? ಲೋಭವೇಕೊ ಭಕ್ತಿಲಾಭವ ನರಸುವಂಗೆ ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೋ? + ಹದುಳಿಗರಾದವರಲ್ಲಿಪ್ಪ ಕೂಡಲಸಂಗಮದೇವ.

(೬೭) ಸಜ್ಜನಸದ್ಭಾವಿ ಅನ್ಯರಲ್ಲಿ ಕಯ್ಯಾಂತುಬೇಡ. ಲಿಂಗವಮುಟ್ಟಿದ ಕೈವಿಶಾಸಲು ಕಂಗಳಲ್ಲಿ ಒಸೆದುನೋಡ ಪರವಧುವ. ಮನದಲ್ಲಿ ಅನ್ಯವನೆನೆಯ ಮಾನವರ ಸೇವೆಮಾಡ. ಅಂಗದ ಹಂಗನೊಲ್ಲ. ಧನದಲ್ಲಿ ವಂಚನೆ ಇಲ್ಲ ಕೂಡಲಸಂಗಮದೇವ, ನಿಮ್ಮ ಶರಣ.

(೬೮) ಕೊಲ್ಲೆನಯ್ಯ ! ಪ್ರಾಣಿಗಳ ಮೆಲ್ಲೆನಯ್ಯ ! ಬಾಯಿಚ್ಚೆಗೆ ಒಲ್ಲೆನಯ್ಯ ! ಪರಸತಿಯರ ಸಂಗವ ಒಲ್ಲೆನಯ್ಯ, ಮುಂದೆತೊಡಕುಂಟೆಂಬುದರಿಂದ+ಬಳ್ಳದ ಬಾಯಂತೆ, ಒಂದೇ ಮನವಮಾಡಿ, ನಿಲ್ಲೆಂದು ನಿಲ್ಲಿಸಯ್ಯ ಕೂಡಲಸಂಗಮದೇವ.

(೬೯) ನೆರೆನಂಬೋನೆರೆನಂಬೋ+ದರಗು ರವಿಲ್ಲದೆ, ಸಾಮವೇದಿಗಳಂತೆ ನೆರೆನಂಬೊನೆರೆನಂಬೋ ದಾಸದುಗ್ಗಳೆಯಂತೆ, ನೆರೆನಂಬೋ ನೆರೆನಂಬೋ ಸಿರಿಯಾಳ ಚಂಗಳೆಯಂತೆ ನಂಬಿದೆಯಾದರೆ, ತನ್ನನೀವ ಕೂಡಲಸಂಗಮದೇವ.

(೭೦) ನಂಬಿಕರೆದಡೆ "ಓ" ಎಂಬ ಶಿವನು. ನಂಬದೆ ಕರೆದಡೆ "ಓ" ಎಂಬನೇ ಶಿವನು? ನಂಬಲರಿಯರು, ನಚ್ಚಲರಿಯರು, ಡಂಭಿನಭಕ್ತರು ನಂಬದೆನಚ್ಚದೆ ಬರಿದೆಕರೆದಡೆ, ಶಂಭುಮೌನದಲ್ಲಿಪ್ಪಕೂಡಲಸಂಗಮದೇವ.

(೭೧) ನಾದಪ್ರಿಯನು ಶಿವನೆಂಬರು, ನಾದಪ್ರಿಯನು ಶಿವನಲ್ಲವಯ್ಯ ವೇದಪ್ರಿಯ ಶಿವನೆಂಬರು. ವೇದಪ್ರಿಯಶಿವನಲ್ಲವಯ್ಯ ನಾದವನುಡಿಸಿದ ರಾವಣಂಗೆ ಅರೆಆಯುಷ್ಯವಾಯಿತ್ತು. ವೇದವನೋದಿದ ಬ್ರಹ್ಮಂಗೆ ಶಿರವು ಹೋಯಿತ್ತು. ನಾದಪ್ರಿಯನು ಅಲ್ಲ. ವೇದಪ್ರಿಯನು ಅಲ್ಲ. ಭಕ್ತಿಪ್ರಿಯನು ನಮ್ಮ ಕೂಡಲಸಂಗಮದೇವ.

(೭೨) ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆಮಾರುವೋದೆನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು. ಮನವಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನುಇವೆಲ್ಲಕ್ಕಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲ ಸಂಗಮದೇವ.

(೭೩) ಮಸಿಯನೇಸುಕಾಲ ಬೆಳಗಿದರೆ, ಬಿಳಿದಾಗ ಬಲ್ಲುದೆ? ಕರ್ಮಸ್ಥಿತಿ ಬೆನ್ನ ಬಿಡದು, ಅನಂತಕೋಟಿ ಸ್ನಾನವ ಮಾಡಿದರೇನು ? ಒಂದು ನಿಮಿಷದ ಉದಾಸೀನವೆ ಕೆಡಿಸಿತ್ತು. ಕೂಡಲ ಸಂಗಮದೇವ, ನಿಮ್ಮ ನಂಬಿಯೂ ನಂಬದ ಡಂಭಕನಾನಯ್ಯ.

(೭೪) ವ್ಯಾಧನೊಂದು ಮೊಲನ ತಂದರೆ, ಸಲುವಹಾಗಕ್ಕೆ ಬೆಲೆಗೈವರಯ್ಯಾ. ನೆಲನಾಳ್ವ ಹೆಣನೆಂದರೆ, ಒಂದು ಹಾಗಕ್ಕೆ ಕೊಂಬುವರಿಲ್ಲ ನೋಡಯ್ಯ ಮೊಲನಿಂದ ಕರಕಷ್ಟ ನರನಬಾಳುವೆ ಸಲೆನಂಬು ನಮ್ಮ ಕೂಡಲ ಸಂಗಮದೇವನ.

(೭೫) ನೀರಲ್ಲಿ ಪುಟ್ಟಿದ ಗುಳ್ಳೆಗೆ ಕಬ್ಬುನದ ಕಟ್ಟುಕೊಟ್ಟು, ಸುರಕ್ಷಿತವ ಮಾಡುವ ಭರವ ನೋಡಾ, ಮಹಾದಾನಿ ಕೂಡಲ ಸಂಗಯ್ಯನ ಪೂಜಿಸಿ, ಬದುಕೋ ಕಾಯವನಿಶ್ಚಯಿಸದೆ.

(೭೬) ನೆರೆಕೆನ್ನೆಗೆ, ತೆರೆಗಲ್ಲಕ್ಕೆ ಶರೀರಗೂಡದ ಹೋಗದಮುನ್ನ, ಹಲ್ಲುಹೋಗಿ, ಬೆನ್ನುಬಾಗಿ ಅನ್ಯರಿಗೆ ಹಂಗಾಗದಮುನ್ನ, ಕಾಲಮೇಲೆ ಕೆಯ್ಯನೂರಿಕೋಲಹಿಡಿಯದಮುನ್ನ, ಮುಪ್ಪಿಂದೊಪ್ಪವಳಿಯದಮುನ್ನ, ಮೃತ್ಯುಮುಟ್ಟದಮುನ್ನ, ಪೂಜಿಸು ಕೂಡಲಸಂಗಮದೇವನ.

(೭೭) ಹೊತ್ತಾರೆಎದ್ದು, ಅಗವಣಿಪತ್ತರೆಯ ತಂದು ಹೊತ್ತುಹೋಗದ ಮುನ್ನಪೂಜಿಸುಲಿಂಗವ. ಹೊತ್ತುಹೋದಬಳಿಕ ನಿನ್ನನಾರು ಬಲ್ಲರು ? ಹೊತ್ತುಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ, ತೊತ್ತು ಗೆಲಸವ ಮಾಡು ಕೂಡಲಸಂಗಯ್ಯನ.

(೭೮) ಮುಂಜಾವದಲೆದ್ದು, ಲಿಂಗದಂಘ್ರಿಯಮುಟ್ಟಿ, ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವದು ಹುಟ್ಟಿದ ಜನ್ಮಕ್ಕೆ ಇದೇ ಸಫಲವು ಸತ್ಯವಚನವೆಂತೆಂಬುದಾಗಿ ಇಂತಲ್ಲದವರ ನೊಲ್ಲ ನಮ್ಮ ಕೂಡಲ ಸಂಗಮದೇವ.

(೭೯) ಮನವೇ ಸರ್ಪ, ತನುವೇ + ಹೇಳಿಗೆ, ಹಾವಿನೊಡತಣ

ಹುದುವಾಳಿಗೆ, ಇನ್ನಾವಾಗ ಕೊಂದಿಹುದೆಂದರಿಯೆ ಇನ್ನಾವಾಗ ತಿಂದಿಹುದೆಂದರಿಯೆ + ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ,ಅದೇಗಾರುಡ, ಕೂಡಲ ಸಂಗಮದೇವ.

(೮೦) ಅಷ್ಟವಿಧಾರ್ಚನೆ ಮಾಡುವದು, ಮಾಡಿದ ಪೂಜೆಯ ನೋಡುವುದು, ಶಿವತತ್ವಗೀತವ ಪಾಡುವುದು, ಶಿವನಮುಂದೆ ಕುಣಿದಾಡುವುದು, ಕೂಡಲಸಂಗಮದೇವರ ಕೂಡುವದು.

(೮೧) ಗಾಂಧಾರಿಮಾಂಧಾರಿ ಎಂಬ ಅಹೋರಾತ್ರಿಯಲ್ಲಿ ಲಿಂಗವ ಪೂಜಿಸಬೇಕು. ಊರಕೋಳಿ ಕೂಗದಮುನ್ನ ಕಾಡುನವಿಲು ಒದರದಮುನ್ನ ಲಿಂಗವ ಪೂಜಿಸಬೇಕು ಗೋವುಗಳ ಕೊಲ್ಲುವ ಪಾಪಿಯ ದನಿಯಕೇಳದ ಮುನ್ನ,ತುಂಬಿ ಮುಟ್ಟಿಪುಷ್ಪನಿರ್ಮಾಲ್ಯವಾಗದಮುನ್ನ, ಶಿವಲಿಂಗವ ಪೂಜಿಸಬೇಕು. ಅದೆಂತೆಂದೊಡೆ ,"ಯೋಲಿಂಗಮರ್ಧರಾತ್ರಿಂತುಶುಚಿರ್ಭೂತ್ವಾಪ್ರಪೂಜಯೆತ್ ಅಗ್ನಿಷ್ಟೋಮ | ಸಹಸ್ರಸ್ಯ ಧರ್ಮಸ್ಯಾಲಭತೇಫಲಮ್ ‖" ಎಂದುದಾಗಿ ಇದನರಿತು ಶುದ್ಧಾಂತಕರಣವಾಗಿ ಶಿವಪೂಜೆಯಮಾಡಬೇಕು. ಆತಂಗೆ ಅಗ್ನಿಷ್ಟೋಮಸಹಸ್ರಫಲಮಹುದು ತನ್ನೊಡನೆ ಮಲಗಿದ್ದ ಸತಿಯನೆಬ್ಬಿಸದೆ. ಶಿವಲಿಂಗಕ್ಕೆರೆವ ಶಿವಸದ್ಭಕ್ತರ ಶ್ರೀಪಾದವ ತೋರಿ ಬದುಕಿಸಯ್ಯಾ ಕೂಡಲಸಂಗಮದೇವ.

(೮೨) ಮಾಡಿಮಾಡಿಕೊಟ್ಟರು ಮನವಿಲ್ಲದೆ, ನೀಡಿನೀಡಿ ಕೆಟ್ಟರು ನಿಜವಿಲ್ಲದೆ. ಮಾಡುವ ನೀಡುವ ನಿಜಗುಣವುಳ್ಳವರ ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ.

(೮೩) ಮಾಡಿದೆನೆಂಬದು ಮನದಲ್ಲಿ ಹೊಳೆದರೆ, ಏಡಿಸಿ ಕಾಡಿತ್ತು ಶಿವನಡಂಗುರ. ಮಾಡಿದೆನೆನ್ನದಿರಾಲಿಂಗಕ್ಕೆ ಮಾಡಿದೆನೆನ್ನದಿರಾ ಜಂಗಮಕ್ಕೆ ಮಾಡಿದೆನೆಂಬುದು ಮನದಲ್ಲಿ ಹೊಳೆಯದಿದ್ದರೆ, ಬೇಡಿದ್ದನೀವ ಕೂಡಲ ಸಂಗಮದೇವ.

(೮೪) ಲೋಕೋಪಚಾರಕ್ಕೆ ಮಜ್ಜನಕ್ಕೆರೆವನಯ್ಯ ಮನದ ತಾಮಸ

ಬಿಡದು ಮನದ ಕಪಟಬಿಡದು ಶಿವಶರಣರೆಂಬುದು ಅಳವಡದಯ್ಯ, ಎನ್ನ ಮನದಲ್ಲಿ ಎರಡುಳ್ಳನಕ್ಕರ ಕೂಡಲಸಂಗಮದೇವರೆಂತೊಲಿವ ?

(೮೫) ಕೆಲಕ್ಕೆ ಶುದ್ಧನಾದೆನಲ್ಲದೆ, ಮನಕ್ಕೆ ಶುದ್ಧನಾಗೆನಯ್ಯ, ಕೈಮುಟ್ಟಿಪೂಜಿಸುವಡೆ, ಎನ್ನ ಕೈಶುದ್ಧಿ ಇಲ್ಲವಯ್ಯ, ಮನಮುಟ್ಟಿ ಪೂಜಿಸುವಡೆ, ಎನ್ನ ಮನಶುದ್ಧವಿಲ್ಲವಯ್ಯ, ಭಾವಶುದ್ಧವಾದೊಡೆ ಕೂಡಲಸಂಗಮದೇವನಿತ್ತ ಬಾಯೆಂದೆತ್ತಿಕೊಳ್ಳನೇಕಯ್ಯ ?

(೮೬) ಹಸಿವಾದ ಡುಂಬುದನು ಸತಿಯ ಸಂಭೋಗವನು ಆನಾಗಿ ನೀಮಾಡೆಂಬುವರುಂಟೇ ? ಮಾಡುವದು ಮಾಡುವದು ಮನಮುಟ್ಟಿ ಮಾಡುವದು ಮಾಡುವದು ತನುಮುಟ್ಟಿ ತನುಮುಟ್ಟಿ, ಮನಮುಟ್ಟದಿರ್ದರೆ, ಕೂಡಲಸಂಗಮದೇವನೇತರಲ್ಲಿ ಮೆಚ್ಚುವನು ?

(೮೭) ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ ? ತನ್ನಲಿಂಗಕ್ಕೆ ತಾಮಾಡುವ ನಿತ್ಯನೇಮವನು ತಾವಮಾಡಬೇಕಲ್ಲದೆ, ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ ? ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ, ನಿಮ್ಮನೆತ್ತಬಲ್ಲರು ಕೂಡಲಸಂಗಮದೇವ.

(೮೮) ಬಂಡಿತುಂಬ ಪತ್ರಿಯತಂದು, ಕಂಡಕಂಡಲ್ಲಿ ಮಜ್ಜನಕ್ಕೆರೆದು, ತಾಪತ್ರಯವಕಳೆದು ಪೂಜಿಸಿ. ತಾಪತ್ರಯದ ಲಿಂಗನೊಲ್ಲ, ಕೂಡಲಸಂಗಮದೇವ ಬರಿಯ ಉದಕದಲ್ಲಿ ನೆನೆವನೇ ?

(೮೯) ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿತುಂಬಿ, ಮನದಲ್ಲಿ ನಿಮ್ಮ ನೆನಹುತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ, ಕೂಡಲಸಂಗಮದೇವ, ನಿಮ್ಮ ಚರಣಕಮಲದೊಳು + ಸೊಗದ + ಬಂಡನುಂಬ ತುಂಬಿಯಾಗಿರ್ದೆನು.

(೯೦) ಮನಮನ ಬೆರಸಿದಲ್ಲಿ, ತನುಕರಗದಿದ್ದಡೆ, ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿರ್ದಡೆ, ಕಂಗಳಶ್ರುಜಲಂಗಳು ಸುರಿಯದಿ

ರ್ದಡೆ, ನುಡಿವಲ್ಲಿ ಗದ್ಗದಂಗಳು ಹೊರಹೊಣ್ಮದಿರ್ದಡೆ, ಕೂಡಲ ಸಂಗಮ ದೇವರ ಭಕ್ತಿಗಿದೇ ಚಿಹ್ನ ಎನ್ನಲ್ಲಿ ಇಲ್ಲವಾಗಿ ಅನುಡಃಭಕಕಾಣಿರೊ.

(೯೧) ಅಂಗೈಯ್ಯೊಳಗಣಲಿಂಗವನೋಡುತ್ತ, ಕಂಗಳು ಕಡೆಗೋಡಿ ವರಿಯುತ್ತ, ಎಂದಿಪ್ಪೆನೋ ? ನೋಟವೇ ಪ್ರಾಣವಾಗಿ ಎಂದಿಪ್ಪೆನೋ ? ಕೂಟವೇ ಪ್ರಾಣವಾಗಿ ಎಂದಿಪ್ಪೆನೋ ? ಎನ್ನ ಅಂಗವಿಕಾರದ ಸಂಗವ ಳಿದು ಕೂಡಲಸಂಗಮಯ್ಯ "ಜಯಲಿಂಗ, ಲಿಂಗ" ಎನುತಿರ್ಪೆನು.

(೯೨) ಎನಗೆ ನಿಮ್ಮ ನೆನಹಾದಾಗಳೇ ಉದಯ, ಎನಗೆ ನಿಮ ಪಾದಮರಹಾದಾಗಳೇ ಅಸ್ತಮಾನ, ಎನಗೆ ನಿಮ್ಮನೆನಹವೇ ಜೀವಾಳ ಎನಗೆ ನಿಮ್ಮ ನೆನಹವೇ ಪ್ರಾಣ, ಕಾಣಾಸ್ವಾಮಿ ಎನ್ನ ಹೃದಯದಲ್ಲಿ ನಿಮ್ಮ + ಚರಣದುಂಡಿಗೆಯನೊತ್ತಯ್ಯ ಎನ್ನವದನದಲ್ಲಿ ಷಡಕ್ಷರಿಯ ಬರೆ ಯಯ್ಯ ಕೂಡಲಸಂಗಮದೇವ.

(೯೩) ಸುರರು, ಕಿನ್ನರರು, ಕಿಂಪುರುಷರೆಂಬುವರನಾರು ಬಲ್ಲರು ? ಎನ್ನಚಿತ್ತವು ನಿಮ್ಮ ಮೇಲೆ ಲಿಂಗಯ್ಯ, ಎನ್ನಭಾವವು ನಿಮ್ಮ ಮೇಲೆ ಸಂ ಗಯ್ಯ, ಕೂಡಲಸಂಗಮದೇವನಾನಯ್ಯವೆಂಬುದನರಿಯೆನಯ್ಯ.

(೯೪) ಎನ್ನಕಾಯವದಂಡಿಗೆಯಮಾಡಯ್ಯ, ಎನ್ನಶಿರವಸೋರೆಯ ಮಾಡಯ್ಯ, ಎನ್ನನರವತಂತಿಯಮಾಡಯ್ಯ, ಎನ್ನಬೆರಳಕಡ್ಡಿಯಮಾಡ ಯ್ಯಾ, ಮೂವತ್ತೆರಡುರಾಗವ ಹಾಡಯ್ಯ, ಎನ್ನಉರದಲೊತ್ತಿ, ನಿನ್ನ ಜಯಗಾನವಂಬಾರಿಸು, ಕೂಡಲಸಂಗಮದೇವ.

(೯೫) ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ಕಮಲಾಂಬು ಜಕ್ಕೆ ಭಾನುವಿನ ಉದಯದಚಿಂತೆ, ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ. ಎನಗೆ ಕೂಡಲಸಂಗಮದೇವರ ನೆನೆವುದೇ ಚಿಂತೆ.

(೯೬) ಜಗವಸುತ್ತಿಪ್ಪುದು ನಾಶಮಾಯೆಯಯ್ಯ, ನಿನ್ನಸುತ್ತಿ ಪ್ಪುದು ಎನ್ನಮನನೋಡಯ್ಯ, ಜಗಕ್ಕೆ ಬಲ್ಲಿದ ನೀನು, ನಿನಗೆ ಬಲ್ಲಿದ ನಾನು ಕಂಡಯ್ಯ, ಜಗವು ನಿನ್ನೊಳಗೆ, ನೀನು ಎನ್ನೊಳಗೆ + ಕರಿಯು ಕನ್ನಡಿಯೊ ಳಗೆ ಅಡಗಿದಂತೆ ನೀನೆನ್ನೊಳಡಗಿದೆ ಕೂಡಲಸಂಗಮದೇವ.

(೯೭) ಎನ್ನ ತನುಮನವೆರಡಸು ಗುರುಕರುಣದಿಂದ ಲಿಂಗದಲ್ಲಿ ಏಕವಮಾಡಿದನಾಗಿ, ಎನ್ನಂತರಂಗಬಹಿರಂಗವೆರಡೂ ನಿಮ್ಮವು ನೋಡಾ. ನಿಮ್ಮಂತರಂಗದೊಳಗೆ ನಿಮ್ಮನೆ ಇಂಬಿಟ್ಟುಕೊಂಬೆ, ನಿಮ್ಮ ಬಹಿರಂಗದೊಳಗೆ ನಿಮ್ಮನೆ ನಿಜವಾಗಿ ಪೂಜಿಸುವೆ. ನಿಮ್ಮ ಅರಿವಿನಿಂದ ನಿಮ್ಮನೆ ಅರಿವೆ ಕಾಣಾ ಕೂಡಲ ಸಂಗಮದೇವ.

(೯೮) ಸಮತೆಸಮ್ಮತದಿಂದ ನಿಜಗುಣಕಾರಣದಿಂದ ಸತ್ವರಜಸ್ತಮದ ಕ್ರೋಧವಳಿಯದನ್ನಕ್ಕರ, ಅನುಭಾವವೆಲ್ಲಿಯದೋ ? ಆತ್ಮಸ್ತುತಿ ಪರನಿಂದೆ, ಅಸಹ್ಯ, ಅನೃತತರ್ಕ, ಉಡುಗದನ್ನಕ್ಕರ ಅನುಭಾವವೆಲ್ಲಿಯದೋ ? ಅರಿಷಡ್ವರ್ಗ ದಶವಾಯುಗಳ ಏಕಳ ಮನಬಿಡದನಕ್ಕರ ಅನುಭಾವವೆಲ್ಲಿಯದೋ? ಮದಮತ್ಸರವಳಿದಲ್ಲದೆ ಅನುಭಾವವೆಲ್ಲಿಯದೋ ? ಸಮತೆ ಸಜ್ಜನಿಕೆ, ಸಮಯಾಚಾರದ ನಿಜಪಥವು ದುರಾಚಾರಿಗಳಿಗಳವಡುವುದೆ ? ನಮ್ಮ ಕೂಡಲ ಸಂಗನ ಶರಣಂಗಲ್ಲದೆ ಅನುಭಾವವೆಲ್ಲರಿಗೆಲ್ಲಿಯದೋ ?

(೯೯) ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ. ಲಿಂಗಾನುಭಾವದಿಂದ ನಿಮ್ಮಕಂಡೆನ್ನ ಮರೆದೆ ಕೂಡಲಸಂಗಮದೇವ.

(೧೦೦) ಚಂದ್ರಮನಂತೆ ಕಳೆಸಮನಿಸಿತ್ತೆನಗೆ ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯ ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತಯ್ಯ ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವ.

(೧೦೧) ಕಪ್ಪೆ ಸರ್ಪನ ನೆರಳಲ್ಲಿ ಇರ್ಪಂತೆ ಎನಗಾಯಿತ್ತಯ್ಯ ಅಕಟಕಟಾ ! ಸಂಸಾರವು ವೃಥಾಹೋಯಿತಲ್ಲಾ. ಕರ್ತೃ ಕೂಡಲಸಂಗಮದೇವ, ಇವನು ತಪ್ಪಿಸಿ ನನ್ನನು ರಕ್ಷಿಸಯ್ಯ ಪ್ರಭುವೇ.

(೧೦೨) ಶೂಲದಮೇಲಣ ಭೋಗವೇನಾದರೇನೊ ? ನಾನಾವರ್ಣದ ಸಂಸಾರಹಾವಹಾವಡಿಗನ ಸ್ನೇಹದಂತೆ. ತನ್ನಾತ್ಮವೇ ತನಗೆ ಬಗೆಯಾದ ಬಳಿಕ + ಬಿನ್ನಾಣವುಂಟೆ ? ಮಹಾದಾನಿ ಕೂಡಲಸಂಗುದೇವ.

(೧೦೩) ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯ ಕಾಯಯ

ಎನ್ನುವನು, ಕಾಯಯ್ಯ ಕಾಯಯ್ಯ. ಪುರುಳಿಲ್ಲ ಪುರುಳಿಲ್ಲ. ಕೂಡಲ ಸಂಗಮದೇವಶಿವಧೋ, ಶಿವಧೋ.

(೧೦೪) ನಾನೊಂದ ನೆನೆದರೆ, ತಾನೊಂದ ನೆನೆವುದು. ನಾನಿತ್ತ ಲೆಳೆದರೆ, ತಾನತ್ತ ಲೆಳೆವುದು. ತಾಬೇರೆ ಎನ್ನನಳಲಿಸಿ ಕಾಡಿತ್ತು. ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು. ಕೂಡಲಸಂಗಮದೇವನ ಕೂಡಿಹೆನೆಂದರೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ.

(೧೦೫) ಇಂದಿಂಗೆಂತು ನಾಳಿಂಗೆಂತು ಬೆಂದೊಡಲ ಹೊರೆಯಹೊತ್ತಿತ್ತೆನ್ನ ಸಂಸಾರ. ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬಹ್ಯೇಯವಿಲ್ಲ. ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿ ಇಲ್ಲ. ಎಂದೆಂದು ಸದಾಶಿವನ ಕುಂದದೆ ನೆನೆಯಲೀಯದೆ, ಕೊಂದುದಯ್ಯ ಈ ಮಾಯೆ ಕೂಡಲಸಂಗಮ ದೇವ.

(೧೦೬) ವಿಷಯವೆಂಬ ಹಸರನೆನ್ನ ಮುಂದೆ ತಂದು ಪಸರಿಸದಿರಯ್ಯ ಪಶುವೇನಬಲ್ಲುದು ಹಸುರೆಂದೆಳಸುವದಲ್ಲದೆ? ವಿಷಯ ರಹಿತನಮಾಡಿ ಭಕ್ತಿರಸವಹಣಿಯ ಮೇಯಿಸಿ, ಸುಬುದ್ಧಿ ಎಂಬ ಉದಕವನೆರೆದು, ನೋಡಿ ಸಲಹಯ್ಯ ಕೂಡಲಸಂಗಮದೇವ.

(೧೦೭) ಬೆಳೆಯುದ ಭೂಮಿಯುಲೊಂದು ಪ್ರಳಯದ ಕಸ ಹುಟ್ಟಿ ತಿಳಿಯಲೀಯ್ಯದು, ಎಚ್ಚರಲೀಯ್ಯದು. ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯ, ಲಿಂಗತಂದೆ, ಸುಳಿತೆಗೆದು ಬೆಳೆವೆನು ಕೂಡಲಸಂಗಮದೇವ.

(೧೦೮) ಸಮುದ್ರದೊಳಗಣಸಿಂಪಿಯಂತೆ ಬಾಯಬಿಡುತ್ತಲಿದ್ದೇವೆ. ನೀವಲ್ಲದೆ ಮತ್ತಾರೂ ಎನ್ನನರಿವರಿಲ್ಲ, ನೋಡಯ್ಯ. ಕೂಡಲಸಂಗಮ ದೇವ, ನೀವಲ್ಲದೊಳಕೊಂಬುವರಿಲ್ಲ ನೋಡಯ್ಯ.

(೧೦೯) ಆನುಮಾಡಿದ ತಪ್ಪನೆಣಿಸಿಹೆನೆಂದರೆ, ಗಣನೆಯಿಲ್ಲ. ನಡೆದು ತಪ್ಪುವೆನು. ಮಾಡಿತಪ್ಪುವೆ. ನೀಡಿತಪ್ಪುವೆ ಕೂಡಿತಪ್ಪುವೆ. ಅರಿದು ತಪ್ಪುವೆ. ಮರೆದು ತಪ್ಪುವೆ. ಎನ್ನತಪ್ಪನೊಪ್ಪಮಾಡಿಕೊಂಬುದಲ್ಲದೆ, ಚಿತ್ತಕ್ಕೆ ತರಲಾಗದು ಕೂಡಲಸಂಗಮದೇವ.

(೧೧೦) ಎಡದ ಪಾದದಲೊದ್ದರೆ, ಬಲದ ಪಾದವ ಹಿಡಿವೆ. ಬಲದ ಪಾದದಲೊದ್ದರೆ, ಎಡದ ಪಾದವ ಹಿಡಿವೆ. ತ್ರಾಹಿ, ತ್ರಾಹಿ, ತಪ್ಪೆನ್ನದು, ಕ್ಷಮೆ ನಿಮ್ಮದು. ಕೂಡಲಸಂಗಮದೇವ ನಿಮ್ಮ ಕರುಣದಕಂದ ನಾನು.

(೧೧೧) ಮೇರುಗುಣವನರಸುವದೇ ಕಾಗೆಯಲ್ಲಿ ? ಪರುಷಗುಣವನರಸುವದೇ ಕಬ್ಬುನದಲ್ಲಿ ? ಸಾಧುಗುಣವನರಸುವನೇ ಅವಗುಣಿಯಲ್ಲಿ ? ಚಂದನಗುಣವನರಸುವದೇ ತರುಗಳಲ್ಲಿ ? ಸರ್ವಗುಣ ಸಂಪನ್ನಲಿಂಗವೇ, ನೀನೆನ್ನಲ್ಲಿ ಅವಗುಣವ ನರಸುವದೇ ಕೂಡಲ ಸಂಗಮದೇವ.

(೧೧೨) ತನುವೆಂತಿರ್ದಡೇನಯ್ಯ ? ಮನನಿರ್ಮಲವಾದರೇಸಾಲದೇ ? ಎಂತಿರ್ದಡೇನು ಲಿಂಗಭಕ್ತ ? ಎಂತಿರ್ದಡೇನು ಲಿಂಗಶರಣ ? ಎಂತಿರ್ದಡೇನು ? ನೋಡಯ್ಯ ಶಿಶುವೆಂದಡೆ, ತಾಯಿ ನೋವಂತೆ ಕೂಡಲ ಸಂಗಮದೇವ.

(೧೧೩) ಒಲೆಹತ್ತಿ ಉರಿದರೆ ನಿಲಬಹುದಲ್ಲದೆ, ಧರೆಹತ್ತಿ ಉರಿದರೆ ನಿಲ್ಲಬಾರದು. ಏರಿನೀರುಂಬರೆ, ಬೇಲಿಕೆಯಿಮೇವರೆ, ನಾರಿ ತನ್ನಯ ಮನೆಯಲ್ಲಿ ಕಳವರೆ, ತಾಯಿಮೊಲೆವಾಲು ನಂಜಾಗಿ ಕೊಲುವರೆ, ಇನ್ನಾರಿಗೆ ದೂರುವೆನಯ್ಯಾ ಕೂಡಲಸಂಗಮದೇವ.

(೧೧೪) ಕಾಳಿದಾಸಂಗೆ ಕಣ್ಣನಿತ್ತೆ ವಹಿಲಯ್ಯನ ನಿಜಪುರಕೊಯ್ದೆ ನಂಬಿಕರೆದಡೆ "ಓ" ಎಂದೆ. ತೆಲಗು ಜೊಮ್ಮಯಂಗೆ ಒಲಿದೆ. ದೇವಾ ಕೂಡಲ ಸಂಗಮದೇವ, ಎನ್ನನೇತಕ್ಕೊಲ್ಲಿರಯ್ಯ

(೧೧೫) ಆಶೆ ಎಂಬ ಪಾಶದಲ್ಲಿ ಭವಬಂಧನನಾಗಿದ್ದೆನಯ್ಯಾ. ಸಕೃತ್ ನಿಮ್ಮ ನೆನೆಯಲು ಎನಗೆ ತೆರಹಿಲ್ಲವಯ್ಯಾ. ಕರುಣಾಕರ ಅಭಯಕರವರದಾನಿ ಕರುಣಿಸಯ್ಯ. ಸಂಸಾರಬಂಧನವ ಮಾಣಿಸಿ ಎನಗೆ ಕೃಪೆಮಾಡಿ, ನಿಮ್ಮ ಶ್ರೀಪಾದಪದ್ಮದಲ್ಲಿ ಭ್ರಮರನಾಗಿರಿಸು, ಭಕ್ತಜನ ಮನೋವಲ್ಲಭ ಕೂಡಲಸಂಗಮದೇವ.

(೧೧೬) ಉರಿಯೊಳಗಣ ಕರ್ಪೂರಕ್ಕೆ ಕರಿಯುಂಟೇ ಅಯ್ಯ ?

ಬಯಲ + ಮರೀಚಿಯ ಜಲಕ್ಕೆ ಕೆಸರುಂಟೇ ಅಯ್ಯ! ವಾಯುವನಪ್ಪಿದ ಪರಿಮಳಕ್ಕೆ ನಿರ್ಮಾಲ್ಯ ಉಂಟೇ ಅಯ್ಯ? ನೀವು ನೆರೆ ಒಲಿದಬಳಿಕ ಎನಗೆ ಭವ ಉಂಟೇ? ಕೂಡಲಸಂಗಮದೇವ ನಿಮ್ಮ ಚರಣಕಮಲದೊಳಗೆ ಎನ್ನನಿಂಬಿಟ್ಟುಕೊಳ್ಳಯ್ಯ.

(೧೧೭) ಏಕಳನಾದೆನು ಪಂಚೇಂದ್ರಿಯ ಧಾತುವಿನಿಂದ. ಮತಿಗೆಟ್ಟೆನು ಮನದವಿಕಾರದಿಂದ. ಧೃತಿಗೆಟ್ಟೆನು ಧನದವಿಕಾರದಿಂದ. ಗತಿಗೆಟ್ಟೆನು ಕಾಯವಿಕಾರದಿಂದ. ಶರಣುಹೊಕ್ಕೆನು ಕೂಡಲಸಂಗಮದೇವಯ್ಯಾ.

(೧೧೮) ಆಸೆಯಾಮಿಷ ತಾಮಸಹುಸಿ ವಿಷಯ ಕುಟಿಲಕುಹಕ ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಿಗೆಮೇಲಿಂದತ್ತ ತೆಗೆದುಕಳೆಯಯ್ಯ. ಅವೆಂತೆಂದೊಡೆ, ನಿಮ್ಮತ್ತ ಲೆಸ್ನ ಬರಲೀಯವು. ಇದು ಕಾರಣ ಇವೆಲ್ಲವ ಕಳೆದು ಎನ್ನನಿಮ್ಮಯ ಭಕ್ತನ ಮಾಡು ಕೂಡಲಸಂಗಮದೇವ.

(೧೧೯) ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯ. ಮನದ ತಾಮಸಬಿಡದು. ಮನದಕಪಟಬಿಡದು. ಶಿವಶರಣೆಂಬುದು ಅಳವಡದಯ್ಯಾ. ಎನ್ನಮನದಲ್ಲಿ ಎರಡುಳ್ಳನ್ನಕ್ಕರ ಕೂಡಲಸಂಗಮದೇವನೆಂತೊಲಿವ.

(೧೨೦) ಕೊಂಬೆಯಮೇಲಿನ ಮರ್ಕಟನಂತೆ ಲಂಘಿಸುವುದು ಎನ್ನ ಮನವು. ನಿಂದಲ್ಲಿನಿಲ್ಲಲೀಯದೆನ್ನ ಮನವು ಹೊಂದಿದಲ್ಲಿಹೊಂದಲೀಯದೆನ್ನ ಮನವು. ಕೂಡಲಸಂಗಮದೇವನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ.

(೧೨೧) ಅಂದಣವನೇರಿದ ಸೊಣಗನಂತೆ, ಕಂಡದೆಬಿಡದು ತನ್ನ ಮುನ್ನಿನ ಸ್ವಭಾವವನು. ಸುಡುಸುಡು ಮನವಿದು ವಿಷಯಕ್ಕೆ ಹರಿವುದು. ಮೃಡ, ನಿಮ್ಮನನುದಿನ ನೆನೆಯಲೀಯದು ಎನ್ನೊಡೆಯ ಕೂಡಲಸಂಗಮದೇವ; ನಿಮ್ಮ ಚರಣವನೆನೆವಂತೆ ಕರುಣಿಸು, ಸೆರೆಗೊಡ್ಡಿಬೇಡುವೆ, ನಿಮ್ಮ ಧರ್ಮ.

(೧೨೨) ಪುಷ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ

ಬಾಳುವೆ ಸಂಸಾರಸಂಗ ಬಿಡದು, ನೋಡೆನ್ನಮನವು. ಈ ಸಾಯಿತನವ ಮಾಣಿಸು, ಕೂಡಲಸಂಗಮದೇವಯ್ಯ ನಿಮ್ಮ ಧರ್ಮ.

(೧೨೩) ಬೆಲ್ಲವ ತಿಂದ ಕೋಡಗನಂತೆ, ಸಿಹಿಯನೆನೆಯದಿರಾ, ಮನವೇ, ಕಬ್ಬುತಿಂದ ನರಿಯಂತೆ ಹಿಂದನೆಣಿಸದಿರಾ, ಮನವೇ ಗಗನವನ ಡರಿದಕಾಗೆಯಂತೆ, ದೆಸೆದೆಸೆಗೆ ಹಂಬಲಿಸದಿರಾ, ಮನವೇ. ಕೂಡಲ ಸಂಗನ ಶರಣರಕಂಡು, ಲಿಂಗವೆಂದು ನಂಬುಳಂಡೆಯಾ, ಮನವೇ.

(೧೨೪) ನನ್ನ ಚಿತ್ತವು ಅತ್ತಿಯಹಣ್ಣು ನೋಡಯ್ಯ. ವಿಚಾರಿಸಿ ದರೆ, ಏನು ಹುರುಳಿಲ್ಲವಯ್ಯ. ಪ್ರಪಂಚಿನ ಡಂಭಿನಲ್ಲಿ ಎನ್ನನೊಂದು ರೂಪವಮಾಡಿ, ನೀವಿರಿಸಿದರಯ್ಯ ಕೂಡಲಸಂಗಮದೇವ.

(೧೨೫) ತನ್ನಿಚ್ಛೆಯನುಡಿದರೆ, ಮೆಚ್ಚುವದೀಮನವು. ಇದಿರಿ ಚ್ಛೆಯ ನುಡಿದರೆ, ಮೆಚ್ಚದೀಮನವು. ಕೂಡಲಸಂಗನಶರಣರನೆಚ್ಚದ ಮೆಚ್ಚದ ಮನವ ಕಿಚ್ಚಿನೊಳಗಿಕ್ಕು.

(೧೨೬) ಹೃದಯದಲ್ಲಿಪ್ಪುದೆಲ್ಲ ನಂಜುಕಂಡೆಯ್ಯ. ಕಂಗಳಲೊ ಬ್ಬನಕರೆವಳು. ಮನದಲೊಬ್ಬನ ನೆನೆವಳು. ವಚನದಲೊಬ್ಬನ ನೆರೆ ವಳು. ಇಂತಿವಳತನು ಒಂದೆಸೆ, ಮನಒಂದೆಸೆ, ಮಾತೊಂದೆಸೆ, ಈಮಾ ನಸಗಳ್ಳಿಯ ನನ್ನವಳೆಂದು ನಂಬುವ ಊರಿನಗರರನೇನೆಂಬೆನಯ್ಯ ಕೂಡಲಸಂಗ ಮದೇವ.

(೧೨೭) ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ. ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ. ಛಲಬೇಕು ಶರಣಂಗೆ ಪರದೈವವನೊಲ್ಲೆ ವೆಂಬ. ಛಲಬೇಕು ಶರಣಂಗೆ ಪರವಾದಿ ನಿಗ್ರಹದಲ್ಲಿ. ಛಲಬೇಕು ಶರ ಣಂಗೆ ಪ್ರಸಾದವಿರಬೇಕೆಂಬ. ಛಲವಿಲ್ಲದಿದ್ದರೆ, ಮೆಚ್ಚನು ನಮ್ಮ ಕೂಡಲ ಸಂಗಮದೇವಯ್ಯ.

(೧೨೮) ಮಾತಿನ ಮಾಲೆಯಲ್ಲಪ್ಪುದೇ ಭಕ್ತಿ. ? ಮಾಡಿ ಸವೆ ಯದನ್ನಕ್ಕರ, ಮನಸವಿಯದನ್ನಕ್ಕರ ಧನಸವಿಯದನ್ನಕ್ಕರ, ಅಪ್ಪುದೇ

ಭಕ್ತಿ ? ಕೂಡಲಸಂಗಮದೇವನೊಲಿದರೆ, ಸರಸವಾಡುವನು. ಸ್ಥಿರಿಸದನ್ನಕ್ಕ ರ ಅಪ್ಪುದೇ ಭಕ್ತಿ ?

(೧೨೯) ಅರ್ಥವನರ್ಥವಮಾಡಿ ಕೋಳಾಹಳಂಗೈವುತ್ತಿರಲಿ, ಹುಟ್ಟಿದಮಕ್ಕಳ ನವಖಂಡವಮಾಡಿ ಕಡಿವುತ್ತಿರಲಿ. ಮುಟ್ಟಿದಸ್ತ್ರೀಯ ಕಣ್ಣಮುಂದೆ ಅಭಿಮಾನಂಗೊಂಡು ನೆರೆವುತ್ತಿರಲಿ. ಇಂತಿವೆಲ್ಲವು ಹೊರಗಣವು. ಇನ್ನೆನ್ನ ಅಂಗದಮೇಲೆ ಬರಲಿ. ಇಕ್ಕುವಶೂಲ ಪ್ರಾಪ್ತಿಯಾಗಲಿ. ಹಿಡಿಖಂಡವ ಮಾಡಿ ಕಡಿವುತ್ತಿರಲಿ. ಮತ್ತೆಯೂ ಲಿಂಗಾರಾಧನೆಯ ಮಾಡುವೆ, ಜಂಗಮಾರಾಧನೆಯ ಮಾಡುವೆ, ಪ್ರಸಾದದಕ್ಕೆ ತಪ್ಪೆ. ಇಂತಪ್ಪಭಾಷೆ ಕಿಂಚಿತ್ತು ಹುಸಿಯಾದಡೆ, ನೀನಂದೇ ಮೂಗಕೊಯ್ಯಿ ಕೂಡಲಸಂಗಮದೇವ.

(೧೩೦) ಕಾಯದ ಕಳವಳಕಂಜಿ ಕಾಯಯ್ಯ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯ ಎನ್ನೆನು. "ಯದ್ಭಾವಂ ತದ್ಭವತಿ" ಉರಿಬರಲಿ, ಸಿರಿಬರಲಿ, ಬೇಕು ಬೇಡೆನ್ನೆನಯ್ಯಾ. ಆನುನಿಮ್ಮ + ಹಾರೆನು. ಮಾನವರ ಬೇಡೆನು. ಆಣೆ, ನಿಮ್ಮಾಣೆಯಯ್ಯ ಕೂಡಲಸಂಗಮದೇವ.

(೧೩೧) ನಾಳೆ ಬಪ್ಪುದು ನಮಗಿಂದೇಬರಲಿ. ಇದಕಾರಂಜುವರು? ಇದಕಾರಳುಕುವರು? "ಜಾತಸ್ಯಮರಣಂಧ್ರುವಂ" ಎಂದುದಾಗಿ, ನಮ್ಮ ಕೂಡಲಸಂಗಮದೇವ ಬರೆದ ಬರಹವ ತಪ್ಪಿಸುವರೇ ಹರಿಬ್ರಹ್ಮಾದಿಗಳವಲ್ಲ.

(೧೩೨) ಎಲ್ಲರೂ ವೀರರು, ಎಲ್ಲರೂ ಧೀರರು, ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು. ಕಾಳಗದ ಮುಖದಲ್ಲಿ ಕಾಣಬಹುದು. ಓಡುವ ಮುಖದಲ್ಲಿ ಕಾಣಬಾರದು. ನಮ್ಮ ಕೂಡಲಸಂಗನ ಶರಣರುಧೀರರು, ಉಳಿದವರೆಲ್ಲ ಅಧೀರರು.

(೧೩೩) ದೇವನೊಬ್ಬ, ನಾಮ ಹಲವು. ಪರಮಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದಡೆ, ಕಿವಿ ಮೂಗ ಕೊಯ್ಯುವನು ಹಲವು ದೈವದ ಎಂಜಲ ತಿಂಬವರ ನೇನೆಂಬೆನಯ್ಯ, ಕೂಡಲಸಂಗಮದೇವ?

(೧೩೪) ಕಂಡ ಕಂಡವರೆಲ್ಲರ ಗಂಡರೆಂದೆಂಬ ಧಿಂಡೆಯನವಳ

ಸಜ್ಜನೆ ಎಂದೆನ್ನಬಹುದೇ ? ಲಿಂಗ ಪ್ರಸಾದವಸುಂಡು ಅನ್ಯದೈವಂಗಳ ಕೊಂಡಾಡುವವರ ನಮ್ಮ ಕೂಡಲಸಂಗಮದೇವರು ಆ ಭಂಡರಿಗೆ ಮಾಡಿದ ಹುಳು ಗೊಂಡವನು.

(೧೩೫) ಕರ್ತನ ಪೂಜಿಸಿ, ಕುತ್ಸಿತ ದೈವಕ್ಕೆರಗುವದು, ಕತ್ತೆಗೆ ಕುದುರೆಗೆ ಹುಟ್ಟಿದ ಹೇಸರನಂತೆ. ಅವರ ಭಕ್ತರೆಂತೆಂಬೆ? ಭೃತ್ಯರೆಂತೆಂಬೆ ? ಶರಣರೆಂತೆಂಬೆನವರ ? ಎರಡುಳ್ಳ ಪ್ರಪಂಚಿಗಳ ಮೆಚ್ಚ ಕೂಡಲಸಂಗಮದೇವ.

(೧೩೬) ಸತ್ತು ಹುಟ್ಟುವನಲ್ಲ. ಸಂದೇಹ ಸೂತಕಿಯಲ್ಲ. ಆಕಾರ ನಿರಾಕಾರನಲ್ಲ ನೋಡಯ್ಯ. ಕಾಯವಂಚಕನಲ್ಲ, ಜೀವವಂಚಕನಲ್ಲ. ನಿರಂತರ ಸಹಜನೋಡಯ್ಯ. ಶಂಕೆಯಿಲ್ಲದ ಮಹಾ ಮಹಿಮನೋಡಯ್ಯ. ಕೂಡಲಸಂಗನ ಶರಣರು ಉಪಮಾತೀತರು ನೋಡಯ್ಯ.

(೧೩೭) ಕಿಚ್ಚು ದೈವವೆಂದು ಹವಿಯ ನಿಕ್ಕುವ ಹಾರುವರ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ, ಬಚ್ಚಲನೀರು ಬೀದಿಯಧೂಳವ ಹೊಯ್ದು, ಬೊಬ್ಬಿಟ್ಟು, ಎಲ್ಲರ ಕರೆವರಯ್ಯ, ಕೂಡಲಸಂಗಮದೇವ, ವಂದನೆಯ ಮರೆದು ನಿಂದಿಸುತ್ತಲಿಪ್ಪರಯ್ಯ ?

(೧೩೮) ನೀರಕಂಡಲ್ಲಿ ಮುಳುಗುವರಯ್ಯಾ! ಮರನಕಂಡಲ್ಲಿ ಸುತ್ತುವರಯ್ಯಾ ! ಬತ್ತುವ ಜಲವ ಒಣಗುವ ಮರನ ನೆಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವ.

(೧೩೯) ನಿಮ್ಮನರಿಯದ ಕಾರಣ, ಕಯ್ಯಲ್ಲಿ ಹುಲ್ಲು. ನಿಮಗೆರಗದ ಕಾರಣ ಕೊರಳಲ್ಲಿ ನೇಣು. ಹಿಂಡಲೇಕೋ ? ತೊಳೆಯಲೇಕೋ ? ಮುಳುಗಿ ಮುಳುಗಿ ಮೂಗ ಹಿಡಿಯಲೇಕೋ ? ಕೂಡಲಸಂಗನ ಶರಣರಲ್ಲಿ ಡೋಹರ ಕಕ್ಕಯ್ಯನಾವ ತೊರೆಯಲ್ಲಿಮಿಂದ ?

(೧೪೦) ಅಷ್ಟಮಿ, ನವಮಿ, ಎಂಬ ಕಲ್ಪಿತವೇಕೊ ಶರಣಂಗೆ? ತಪ್ಪಿತ್ತು ಗಣಪದವಿ. ಲಿಂಗಕ್ಕೆ ದೂರ ಒಬ್ಬರಿಗಾಳಾಗಿ, ಒಬ್ಬರ ನೋಲೈಸುವ ನಿರ್ಬುದ್ಧಿ ಮನುಜರನೇನೆಂಬೆ ಕೂಡಲಸಂಗಮದೇವ.

(೧೬೧) ಮಾರಿ ಮಸಣಿ ಎಂಬಿವು ಬೇರಿಲ್ಲ, ಕಾಣಿರೋ. ಮಾರಿ ಎಂಬುದೇನು ? ಕಂಗಳು ತಪ್ಪಿ ನೋಡಿದರೆ, ಮಾರಿ. ನಾಲಿಗೆ ತಪ್ಪಿ ನುಡಿದರೆ, ಮಾರಿ. ನಮ್ಮ ಕೂಡಲ ಸಂಗಮದೇವರ ನೆನೆಹುಮರೆದರೆ ಮಾರಿ.

(೧೬೨) ಆದ್ಯರ ವಚನ ಪರುಷ ಕಂಡಯ್ಯಾ ! ಸದಾಶಿವನೆಂಬ ಲಿಂಗವ ನಂಬುವುದು. ನಂಬಲೊಡನೆ, ನೀವಿಜಯಕಂಡಯ್ಯ ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ಕೂಡಲಸಂಗನ ಶರಣರ ವಚನಜೀವ ಸವಿದಂತೆ.

(೧೬೩) ಶಾಸ್ತ್ರ ಘನವೆಂಬೆನೆ ? ಕರ್ಮವಭಜಿಸುತ್ತಿಹುದು. ವೇದ ಘನವೆಂಬೆನೇ ? ಪ್ರಾಣವಧೆಯ ಹೇಳುತ್ತಿದೆ. ಶ್ರುತಿಘನವೆಂಬೆನೆ ? ಮುಂದಿಟ್ಟು ಅರಸುತ್ತಲಿದೆ. ಅಲ್ಲಲ್ಲಿಯೂ ನೀವಿಲ್ಲದಕಾರಣ, ತ್ರಿವಿಧದಾಸೋಹದಲ್ಲಲ್ಲದೆ ಕಾಣಬಾರದು ಕೂಡಲಸಂಗಮದೇವ.

(೧೬೪) ಆದಿಪುರಾಣ ಅಸುರರಿಗೆ ಮಾರಿ. ವೇದಪುರಾಣಹೋತಿಗೆಮಾರಿ, ರಾಮಪುರಾಣರಕ್ಕಸರಿಗೆ ಮಾರಿ, ಭಾರತಪುರಾಣ ಗೋತ್ರಕ್ಕೆ ಮಾರಿ, ಇವೆಲ್ಲ ಪುರಾಣವು ಕರ್ಮಕ್ಕೆ ಮೊದಲು. ನಿಮ್ಮ ಪುರಾಣಕ್ಕೆ ಪ್ರತಿ ಇಲ್ಲಕೂಡಲಸಂಗಮದೇವ.

(೧೬೫) ಜಾತಿವಿಡಿದು ಸೂತಕವನರಸುವರೇ ? ಜ್ಯೋತಿವಿಡಿದು ಕತ್ತಲೆಯನರಸುವರೇ ? ಇದೇತಕೋಮರುಳುಮಾನವಾ ? ಜಾತಿಯಲ್ಲಿ ಅಧಿಕನೆಂಬೆನೆ ? ವಿಪ್ರಶತಕೋಟಿಗಳಿರ್ದು ಫಲವೇನು ? ಭಕ್ತಶಿಖಾಮಣಿ ಎಂದುದು ವಚನ. ನಮ್ಮ ಕೂಡಲಸಂಗನ ಶರಣರಪಾದಪರುಷವನಂಬು, ಕೆಡಬೇಡಮನುಜಾ.

(೧೬೬) ಕರ್ಮಜಾತನ ಕಳೆದು ಶ್ರೀಗುರುಲಿಂಗವು ಪುಣ್ಯಜಾತನ ಮಾಡಿದಬಳಿಕ, ಶಿವಕುಲವಲ್ಲದೆ, ಅನ್ಯಥಾಕುಲವುಂಟೇಶರಣಂಗೆ ? ಆವ ಕುಲವಾದಡೇನು ? ಲಿಂಗವಿದ್ದಾತನೇಕುಲಜನು. ಕುಲವನರಸುವರೇ ಶರಣರಲ್ಲಿ ಆಚಾರವನರಸಬೇಕಲ್ಲದೆ ಜಾತಿಸಂಕರನಾದಬಳಿಕ ? ಅದೆಂತೆಂದೊಡೆ, ಶಿವಧರ್ಮದಲ್ಲಿ— "ಶಿವೋ ಜಾತಕುಲೇಧರ್ಮಃ ಪೂರ್ವಜನ್ಮವಿವ

ರ್ಜಿತಃ | ಉಮಾಮಾತಾ ಪಿತಾರುದ್ರ ಈಶ್ವರಃಕುಲಮೇವಚ ‖ ಎಂದು ದಾಗಿ ನಿಮ್ಮ ಶರಣರ ಕುಲಕ್ಕೆ ಪ್ರತಿಗಾಣೆನು. ನಿಮ್ಮ ಕುಲವಲ್ಲವೇ ಅವರು ? ನಿಮ್ಮ ಪ್ರತಿಗಾಣೆನು. ನಿಮ್ಮ ಕುಲಕ್ಕೆ ಪ್ರತಿ ಇಲ್ಲವಾಗಿ, ಕೂಡಲಸಂಗಮದೇವಯ್ಯ, ನಿಮ್ಮ ಶರಣರಲ್ಲಿ ಸೂತಕವನರಸುವರಿಗೆನಾ ಯಕನರಕತಪ್ಪದು.

(೧೪೩) ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬಿರಿ. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರನೇನೆಂಬೆನಯ್ಯ ? ಇವರನೆಂತು ಭಕ್ತ ರೆಂಜೆನಯ್ಯ ? ಇವರನೆಂತುಯುಕ್ತರೆಂಬೆನಯ್ಯ ? ಇವರು ವಜ್ಯ್ರೋಚ್ಛಿ ಭಕ್ತರು, ವಜ್ಯ್ರೋಚಿಭವಿಗಳು, ಅದೆಂತೆಂದೊಡೆಲ್ಯೆಂಗ್ಯೆ ‖ ಸ್ತ್ರೀವಾಥಪುರು ಷ್ಪಂಢೋ ಚಾಂಡಾಲೋದ್ವಿಜವಂಶಜಃ| ನಜಾತಿಭೇದೋಲಿಂಗಾರ್ಚನೆಸರ್ವೆ ರುದ್ರಗಣಾಃಸ್ಮೃತಾಃ ‖ ಎಂದುದಾಗಿ, ಇಂತೆಂಬಪುರಾಣವಾಕ್ಯವತಿಳಿದು ನೋಡಿರೋ. ಸರ್ವರೂ ರುದ್ರಗಣಂಗಳೆಂಬೆ, ಸರ್ವರೂ ಸದ್ಭಕ್ತರೆಂದೆ. ಅವರಲ್ಲಿ ಕುಲವ ನೋಡದೆ ಆಚಾರವನೋಡಿ ಅವರಿಂಗೆ ಬೇಕಾದ ಹೆಣ್ಣ ಕೊಟ್ಟು, ತಮಗೆ ಬೇಕಾದ ಹೆಣ್ಣ ತಂದುಕೊಂಬುದು. ಈ ಕ್ರಮವನರಿ ಯದವರ ಭಕ್ತಿ ಹೊಲತಿಶುದ್ಧನೀರಮಿಂದಂತಾಯಿತು ಕೂಡಲಸಂಗಮ ದೇವ.

(೧೪೮) ವ್ಯಾಸ ಬೋಯಿತಿಯಮಗ. ಮಾರ್ಕಂಡೇಯ ಮಾತಂ ಗಿಯಮಗ, ಮಂಡೋದರಿ ಕಪ್ಪೆಯಮಗಳು. ಕುಲವನರಸದಿರಿಂಭೋ. ಕುಲದಿಂದಮುನ್ನೇನಾದಿರಿಂಭೋ. ಸಾಕ್ಷಾದಗಸ್ತ್ಯ ಕಬ್ಬಿಲಿಗ, ದೂರ್ವಾ ಸಮುಚ್ಚಿಗ, ಕಶ್ಯಪಕಮ್ಮಾರ. ಕೌಂಡಿಲ್ಯನೆಂಬ ಋಷಿ ಮೂರುಲೋಕವರಿ ಯಲು ನಾಯಿದಕಾಣಿರೋ ನಮ್ಮ ಕೂಡಲಸಂಗನವಚನವಿಂತೆಂದು ಶ್ವಪ ಚೋಪಿಯಾದರೇನು, ಶಿವಭಕ್ತನೇಕುಲಜನೆಂದೋ.

(೧೪೯) ತನುವಬೇಡಿದಡೀವೆ, ಧನುವಬೇಡಿದಡೀವೆ, ನಿಮ್ಮಶರಣ ರಿಗೆ. ಎನಗೆ ಬೇಕೆಂಬ ಭಾವಮನದಲ್ಲಿ ಹೊಳೆದಡೆ, ಘನಮಹಿಮ ನಿಮ್ಮ

ಶರಣರ ಪಾದದಾಣೆ. ಮನವಚನಕಾಯದಲ್ಲಿ ನೀನಲ್ಲದೆ, ಮತ್ತೊಂದಥರಿದಡೆ, ಕೂಡಲಸಂಗಮದೇವ, ಮತ್ತೆ ಮರಳಿಭವವೆಂಬಘೋರದಲ್ಲಿಕ್ಕಯ್ಯ.

(೧೫೦) ಮರಗಿಡುಬಳ್ಳಿಧಾನ್ಯಂಗಳ ಬೆಳಸೆಲ್ಲವ ತರಿತರಿದು. ಪ್ರಾಣವಕೊಂದುಂಡು ಶರೀರವ ಹೊರೆವ ದೋಷಕ್ಕೆ ಇನ್ನಾವುದು ವಿಧಿಯಯ್ಯಾ ? ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯಕಡೆಯಾದ ಜೀವಜಾಲವಲ್ಲವೇ ಚರಾಚರವೆಲ್ಲ ? ಅದುಕಾರಣ ಕೂಡಲಸಂಗನಶರಣರು ಲಿಂಗಕ್ಕರ್ಪಿಸಿ ಪ್ರಸಾದವ ಕೊಂಡು ನಿರ್ದೋಷಿಗಳಾಗಿ ಬದುಕಿದರು.

(೧೫೧) ಅಧರತಾಗುವರುಚಿಯ ಉದರತಾಗುವ ಸುಖವ ಲಿಂಗಾರ್ಪಿತವಿಲ್ಲದೆಕೊಂಡರೆ, ಕಿಲ್ಬಿಷನೋಡಾ. ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು ಮೊದಲಾದ ಸರ್ವೇಂದ್ರಿಯಂಗಳಲ್ಲಿ ಪುಟ್ಟುವ ಸಕಲ ಪದಾರ್ಥಂಗಳನ್ನು ಸಾವಧಾನದಿಂದ ಲಿಂಗಕ್ಕೆ ಕೊಟ್ಟುಕೊಂಡರೆ ಅದು ಮಹಾಪ್ರಸಾದವಯ್ಯ ಕೂಡಲಸಂಗಮದೇವ.

(೧೫೨) ಮೌನದಲುಂಬುದು ಆಚಾರವಲ್ಲ. ಲಿಂಗಾರ್ಪಿತಮಾಡಿದಬಳಿಕ, ತುತ್ತಿಗೊಮ್ಮೆ ಶಿವ ಶರಣೆನ್ನುತ್ತಿರಬೇಕು. ಕರಣವೃತ್ತಿಗಳಡಗುವವು, ಕೂಡಲಸಂಗಮದೇವನ ನೆನೆಯುತ್ತ ಉಂಡರೆ.

(೧೫೩) ತಂಗಳ ಬುತ್ತಿಯಕಟ್ಟಿ ಹೊಟ್ಟೆಯಮೇಲಿಟ್ಟುಕೊಂಡರೆ ಹಸಿವುಹೋಗಿ + ಆಪ್ಯಾಯನವಡಗುವದೇ ? ಅಂಗದಮೇಲೆ ಲಿಂಗವಿದ್ದೇನು ಫಲ ? ಲಿಂಗವೂ ಅಂಗವೂ ಕೂಡುವ ಈ ಭೇದವನರಿಯದವರು ಗುರುತಲ್ಪಕರು, ಪಂಚಮಹಾಪಾತಕರು. ಅದೆಂತೆಂದೊಡೆ, ದ್ವೈತಂಭಾವಿತದುಃಖಾನಾಮದ್ವೈತಂ ಪರಮಂ ಪದಂ । ಭಾವಮನ್ನಂ ಪಥಶಾಂತೆತದ್ಭುಂಕ್ತೆಸುಖವಾಹಕಂ ॥ ಮತ್ತೆಯುಂ, ಅಂಗೇನಲಿಂಗಂ ಸಂಬಂಧಂ ಲಿಂಗೇನ ಪ್ರಾಣಸಂಯುತಂ । ನಿಮಿಷಾರ್ಧವಿಯೋಗೇನನರಕೇಕಾಲಮಕ್ಷಮಂ ॥ ಎಂದುದಾಗಿ ಅಂಗದಲ್ಲಿಲಿಂಗ ಒಡಗಲಿಸಬೇಕು, ಲಿಂಗದಲ್ಲಿ ಅಂಗ ಒಡಗಲಿಸಬೇಕು.

ಇದು ಕಾರಣ ಎಲ್ಲರೂ ಅಂಗಸಂಬಂಧಿಗಳಲ್ಲದೆ, ಲಿಂಗಸಂಬಂಧಿಗಳು ಅಪೂರ್ವ ಕಾಣಾ ಕೂಡಲಸಂಗಮದೇವ,

(೧೫೪) ಶ್ರೀಗುರು ಪ್ರಾಣಲಿಂಗವನು ಕರತಲಾಮಲಕವಮಾಡಿ, ಕರಸ್ಥಲಕ್ಕೆ ತಂದುಕೊಟ್ಟನಾಗಿ, ಒಳಗೆನ್ನದೆ ಹೊರಗೆನ್ನದೆ, ಆ ಲಿಂಗವ ನಪ್ಪಿಮುಟ್ಟಿ ಹರುಷದೊಳೋಲಾಡುವೆನು. ಅದೆಂತೆಂದೊಡೆ "ನಾದ ಬಿಂದು ಕಳಾತೀತಂ" ಇಂತೆಂದುದಾಗಿ, ಮಹಾಲಿಂಗವಪಡೆದು, ಆನಂದಿಸುವೆ, ಕೂಡಲಸಂಗಮದೇವ.

(೧೫೫) ಕೆಂಚಕರಿಕನನೆನೆದರೆ, ಕೆಂಚ ಕರಿಕನಾಗಬಲ್ಲನೇ? ಕರಿಕ ಕೆಂಚನ ನೆನೆದರೆ ಕೆಂಚನಾಗಬಲ್ಲನೇ? ದರಿದ್ರನು ಸಿರಿವಂತನ ನೆನೆದರೆ ಸಿರಿವಂತನಾಗಬಲ್ಲನೇ? ಸಿರಿವಂತ ದರಿದ್ರನ ನೆನೆದರೆ, ದರಿದ್ರನಾಗ ಬಲ್ಲನೇ? ಮುಂದಿನ ಪುರಾತನರ ನೆನೆದು ಧನ್ಯನಾದೆನೆಂಬಮಾತಿನರಂಜಕರನೇನೆಂಬೆ ಕೂಡಲಸಂಗಮದೇವ.

(೧೫೬) ಅಶ್ವಮೇಧಯಾಗವದಂತಿರಲಿ. ಅಜಪೆಯುಪದೇಶಸಮಾಧಿಯದಂತಿರಲಿ. ಹೋಮ ಗಾಯಿತ್ರಿಜಪವಂತಿರಲಿ. ಜನಮೋಹನಮಂತ್ರ ತಂತ್ರವಂತಿರಲಿ. ಕೂಡಲಸಂಗಮದೇವರಶರಣರನುಡಿಗಡಣ ಇವೆಲ್ಲಕ್ಕಧಿಕ ನೋಡಯ್ಯ.

(೧೫೭) ಆಪ್ಯಾಯನಕ್ಕೆ ಅನ್ನವನೀಡುವೆ. ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ, ನೀಸಾಕ್ಷಿಯಾಗಿ 'ಛೀ' ಎಂಬೆನು ಕೂಡಲಸಂಗಮದೇವ.

(೧೫೮) ವೇದಶಾಸ್ತ್ರಬಲ್ಲವರ ಹಿರಿಯರೆನ್ನೆ. ಮಾಯಾಭ್ರಾಂತು. ಕವಿತೆ ಗೀತಜ್ಞರ ಹಿರಿಯರೆನ್ನೆ ಇವರು ಹಿರಿಯರುಗಳೇ ಯಾಗನಟ್ಟುವಿಗೆ ಪ್ರಾಣರು? ಇವರಿಂದಧಿಕವ ಸಾಧಿಸುವರೇನು ಕಿರಿಯರೇ? ಇಂತು ವಿದ್ಯಾ, ಗುಣ, ಜ್ಞಾನ, ಧರ್ಮ, ವಿಚಾರ, ಶೀಲಂಗಳ ನಮ್ಮಕೂಡಲ ಸಂಗನ ಶರಣರು ಸಾಧಿಸಿದ ಸಾಧನೆಯ ಸಾಧಿಸುವುದು.

(೧೫೯) ಅಂತರಂಗದೊಳಗಿರ್ದ ನಿರವಯ ಲಿಂಗವನು ಸಾವಯ ಲಿಂಗವಮಾಡಿ, ಶ್ರೀಗುರುಸ್ವಾಮಿ ಕರಸ್ಥಲಕ್ಕೆ ತಂದು ಕೊಟ್ಟಿಷ್ಟಲಿಂಗವು ಅಂತರಂಗನಾವರಿಸಿ, ಅಂತರಂಗದ ಕರಣಂಗಳೇ ಕಿರಣಂಗಳಾಗಿ ಬೆಳಗುವ ಚಿದಂಶವೇ ಪ್ರಾಣಲಿಂಗವು. ಆ ಮೂಲ ಚೈತನ್ಯವೇ ಭಾವಲಿಂಗವು. ಇದ ನರಿದು ನೋಡುವ ನೋಡುವ ನೋಟ ಭಾವಪರಿಪೂರ್ಣವಾಗಿ ತಾನೂ ತಾ ನಾದಲ್ಲದೆ ಇದಿರಿಟ್ಟು ತೋರುವುದಿಲ್ಲವಾಗಿ ಅಖಂಡಪರಿಪೂರ್ಣಮಪ್ಪ ನಿಜವು ತಾನೇ ಕೂಡಲ ಸಂಗಮದೇವ.

(೧೬೦) ಸ್ವಯಲಿಂಗದನುಭಾವ ತನಗೆ ದೊರೆಕೊಂಡ ಬಳಿಕ ದೇ ವಲೋಕವೆಂಬುದೇನೋ, ಮರ್ತ್ಯಲೋಕವೆಂಬುದೇನೋ ? ಆವುದರಲ್ಲಿ ಭೇದವೇನಯ್ಯಾ ? ಕೂಡಲಸಂಗಮದೇವ. ಸರ್ವವೂ ನೀವಾದ ಬಳಿಕ ಆಲಸ್ಯಉಂಟೇ ?



ಮಹಾನುಭಾವರಾದ

## ಶಿವಶರಣರ ಮತ್ತು ಶಿವಶರಣೆಯರ

# ತತ್ತ್ವೋಪದೇಶ

---

### (೧) ಶ್ರೀ ಪ್ರಭುದೇವರು

(೧) ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನೈಷ್ಠೆಯಿಂ ಮಹೇಶ್ವರನಾಗಿ, ಆನೈಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವದೊಳಗಣ ಅರುವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸಭಾವವ ನೈದಿದ ನಿರ್ಭಾವಪದದೊಳು ನಿಂದಭೇದವೇ ಐಕ್ಯಸ್ಥಳಕಾಣಾ ಗುಹೇಶ್ವರ.

(೨) ತಮ್ಮ ತಾವರಿಯರು ಹೇಳಿದರೆ ಕೇಳರು. ಆರ ಹೊಲಬನೇನೆಂದರಿಯರು. ಎಂಟರ ಕಂಟಕವ ಮುನ್ನರಿಯರು. ಏರಿದ ಬೆಟ್ಟವ ಇಳಿಯಲರಿಯದವರನೇನೆಂಬೆ ಗುಹೇಶ್ವರ ?

(೩) ಸತ್ಯವಿಲ್ಲದವರೊಡನೆ ಸಹಸ್ರಕ್ಕೊಮ್ಮೆ ನುಡಿಯಲಾಗದು. ಲಕ್ಷಕ್ಕೊಮ್ಮೆ ನುಡಿಯಲಾಗದು. ಕೋಟಿಗೊಮ್ಮೆ ನುಡಿಯಲಾಗದು ನುಡಲವಂದಿರೊಡತನ, ಮಾರಿಹೊರಲಿ. ಗುಹೇಶ್ವರ ನಿಮ್ಮ ಶರಣರಲ್ಲದವರೊಡನೆ ಬಾಯ್ದೆರೆಯಲಾಗದು.

(೪) ನಾನು ಘನ ತಾನುಘನವೆಂಬ ಹಿರಿಯರುಂಟೇ ಜಗದೊಳಗೆ? ಹಿರಿಯರ ಹಿರಿಯತನದಿಂದೇನಾಯಿತ್ತು ? ಹಿರಿದು ಕಿರಿದೆಂಬ ಶಬ್ದವಡಗಿದಡೆ ಆತನೇ ಶರಣಗುಹೇಶ್ವರ.

(೫) ಆಚಾರವನರಿಯದೆ, ವಿಭವವಳಿಯದೆ, ಕೋಪವಶಗದೆ, ತಾಪಮುರಿಯದೆ, ಒರಿದೆಭಕ್ತರಾದೆವೆಂದು ಬೆಬ್ಬನೆ ಬೆರೆವವರ ಕೇಡಿಂಗೆ ನಾನು ಮರಗುವೆ ಕಾಣಾಗುಹೇಶ್ವರ.

(೬) ಅರಿದೆವರಿದೆವೆಂಬರಿ. ಅರಿದಪರಿ ಎಂತು ಹೇಳಿರೇ? ಅರಿದವರು ಅರಿದೆವೆಂಬರೇ? ಅರಿಯಬಾರದ ಘನವನರಿದವರು ಅರಿಯದಂತಿರ್ಪರು ಗುಹೇಶ್ವರ.

(೭) ಹಳ್ಳದೊಳು ಉರುಳಿ ಬರುತ್ತಿರಲು ನೆರೆ ಕೆರೆಗಳುಂಟಾಗದಿಪ್ಪವೇ? ಸಂಸಾರಸಾಗರದೊಳಗೆ ಮುಳುಗಾಡುತ್ತಿಪ್ಪ ಪ್ರಾಣಿಗಳಿಗೆ ಸುಖ ದುಃಖಗಳು ತಾಗದಿಪ್ಪವೇ? ಇದು ಕಾರಣ ರೂಪಾದ ಜಗಕ್ಕೆ ಪ್ರಳಯವಾಯಿತ್ತು ಗುಹೇಶ್ವರ.

(೮) ಆಶೆಯೆಂಬ ಕೂಸನೆತ್ತಲು ರೋಷವೆಂಬ ತಾಯಿಮುಂದೆ ಬಂದಿರ್ಪಳು ನೋಡಾ ಇಂತೀ ಎರಡಿಲ್ಲದ ಕೂಸನೆತ್ತಬಲ್ಲಡೆ ಅವರ ನಚ್ಚಾಶೀಲವಂತರೆಂಬೆ ಕಾಣಾ ಗುಹೇಶ್ವರ.

## (೨) ಶ್ರೀ ಚೆನ್ನಬಸವಣ್ಣನವರು.

(೧) ಭಕ್ತನು ಶಾಂತನಾಗಿರಬೇಕು. ತನ್ನ ಕುರಿತುಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಹವಚನವನು ಡಿಯಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸುವುದು. ಅಪಾತ್ರದಾನವಮಾಡಲಾಗದು ಸಕಲೇಂದ್ರಿಯಗಳ ತನ್ನವಶವಮಾಡುವದು. ಇದೇ ಮೊದಲಲ್ಲಿದೇಹಶೌಚ ನೋಡಾ. ಲಿಂಗವಪೂಜಿಸಿ ಪ್ರಸಾದವಪಡೆವಡೆ ಇದೇ ಸಾಧನ ಕೂಡಲ ಚನ್ನ ಸಂಗಮದೇವ.

(೨) ಅಮಲದಪ್ಪವರಾರೆಂದಡೆ ಅನಾದಿಮಲಸಂಸಾರವೆಂದರಿದು ನಿರ್ಮೋಹಿಗಳಾದವರು. ಅಕಾಯಚರಿತ್ರರಾರೆಂದಡೆ ಸದ್ಗುರುಪಥದಲ್ಲಿ ನಿಂದು ಆನೆಂಬತನುಗುಣವನಳಿದವರು, ಆದಿ ಅನಾದಿಗಳೆಂಬೆರಡಳಿದವರಾರೆಂದಡೆ ಶಾಂತಿಸ್ಥಾನದಲ್ಲಿ ನಿಂದು ಪರಮಸುಖಿಗಳಾಗಿಪ್ಪವರು. ವೈಷ್ಣತಾ

ದ್ವೈತವನತಿಗಳೆದವರಾರೆಂದಡೆ ತೋರುವ ತೋರಿಕೆ ನಿರ್ಮತ್ಸರವಾದವರು. ಅವರು ತಾವೇ ನಿಮಗರ್ಪಿತನಿಮ್ಮಾಣೆ ಕೂಡಲಚೆನ್ನಸಂಗಮದೇವ.

(೩) ಸತ್ಯವಿಲ್ಲದಭಕ್ತಿ ಸಾಪಿರವರುಷಮಾಡಿದರೇನು ? ನಿಷ್ಠೆಯಿಲ್ಲದಪೂಜೆ ಏಸುಕಾಲವಪೂಜಿಸಿದರೇನು ? ಅಭ್ಯಾಸವಾಯಿತ್ತಲ್ಲದೆ ಸಹಜವಲ್ಲ. ಸನ್ಮತವಲ್ಲ. ನಿಜವಲ್ಲ. ಒಬ್ಬರನೊಬ್ಬರಕಂಡು ಮಾಡುವರಲ್ಲದೆ ತಮ್ಮತಾವುವಿಚಾರಿಸಿಕೊಳಲರಿಯರು. ಇಂತಪ್ಪವರು ಭಕ್ತರೆನಿಸಲಾರರು. ಕೂಡಲಚೆನ್ನಸಂಗಮದೇವ ನೀಸಾಕ್ಷಿಯಾಗಿ ಛೀ, ಛೀ, ಎಂಬೆನು.

(೪) ಭಕ್ತರ ಮಠಕ್ಕೆ ಹೋಗಿ ಒಳಹೊರಗೆಂಬುದು ಶೀಲವೇ ? ನಮ್ಮ ಲಿಂಗಕ್ಕೆ ಒಳ್ಳೆಯ ಅಗ್ಗಣಿಯತನ್ನಿ, ಒಳ್ಳೆಯಪುಷ್ಪವತನ್ನಿ, ಒಳ್ಳೆಯ + ಓಗರವಮಾಡಿರಿ, ಎಂಬುದು ಶೀಲವೆ ? ಅಲ್ಲ. ಪಂಚೇಂದ್ರಿಯ, ಸಪ್ತಧಾತು, ಅರಿಷಡ್ವರ್ಗ, ಅಷ್ಟಮದವಕೊಂದಾತಶೀಲವಂತ ಕೂಡಲಚೆನ್ನಸಂಗಮದೇವ.

(೫) ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ, ಶಿವದೀಕ್ಷೆಯಾದಬಳಿಕ ಸಾಕ್ಷಾತ್ ಶಿವನೆಂದುವಂದಿಸಿ ಪೂಜಿಸಿ ಪಾದೋದಕ ಪ್ರಸಾದವಕೊಂಬುದೇ ಯೋಗ್ಯ. ಹೀಗಲ್ಲದೆ, ಉದಾಸೀನವಮಾಡಿಬಿಡುವವರಿಗೆ ಪಂಚಮಹಾಪಾತಕನರಕಕಾಣಾ ಕೂಡಲಚೆನ್ನಸಂಗಮದೇವ.

(೬) ವೇದವೇದಾಂತವನೋದಿ ಜ್ಞಾನವಸೂರೆಮಾಡುವ ಜಂಗಮ ಕ್ರಿಯಾಹೀನನಾದರೆ ಆಗದು ಸಮರಸ ಆತನಲ್ಲಿ. ಅದೇನುಕಾರಣವೆಂದಡೆ, ಅಲ್ಲಿ ಕೂಡಲಚೆನ್ನಸಂಗಮದೇವ ನಿಲ್ಲಲಾರನು ಸಿದ್ಧರಾಮಯ್ಯ.

(೭) ಮನದಮತ್ಸರವಕಳೆದು ಮನದಕೊನೆಯಮೊನೆಯಮೇಲೆ ಲಿಂಗವ ಕುಳ್ಳಿರಿಸಬೇಕು. ತನುಗುಣವಕಳೆದು ಪ್ರಸಾದಕಾಯವಮಾಡಬೇಕು. ಧನಗುಣವಕಳೆದು ಮಮಕಾಯವೆನಿಸಬೇಕು. ಈ ತ್ರಿವಿಧಗುಣಂಗಳ

ಕಳೆದು ತ್ರಿವಿಧದಾಸೋಹಿಯಾಗಿರಬೇಕಯ್ಯ ನಮ್ಮ ಕೂಡಲಚೆನ್ನಸಂಗಮ ದೇವನಲ್ಲಿ.

(೮) ಕ್ರಿಯೆಯೇ ಜ್ಞಾನ, ಜ್ಞಾನವೇಕ್ರಿಯೆ. ಜ್ಞಾನವೆಂದರೆ ತಿಳಿಯುವದು. ಕ್ರಿಯೆ ಎಂದರೆ, ತಿಳಿದಂತೆಮಾಡುವದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ. ಅದರಂತೆ ಆಚರಿಸುವದೇ ಕ್ರಿಯೆ. ಅಂತು ಆಚರಿಸದಿದ್ದರೆ ಅದೇ ಅಜ್ಞಾನನೋಡಾ ಕೂಡಲಚೆನ್ನಸಂಗಮ ದೇವ.

(೩) ಶ್ರೀ ಸಿದ್ಧರಾಮಶಿವಯೋಗಿಗಳು.

(೧) ಆರೇನೆಂದರೂ + ಓರಂತಿಪ್ಪುದೇಸಮತೆ. ಆರು ಜರಿದರೂ ಅವರೆನ್ನಮನದ ಕಾಳಿಕೆಯ ಕಳೆದರೆಂಬುದೇ ಸಮತೆ. ಆರು ಸ್ತೋತ್ರ ಮಾಡಿಹರೆನ್ನ ಜನ್ಮದಹಗೆಗಳೆಂಬುದೇ ಸಮತೆ. ಇಂತಿದುಗುರುಕಾರುಣ್ಯ. ಮನವಚನಕಾಯದಲ್ಲಿ ಅಹಿತವಿಲ್ಲದೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯ, ನಿಮ್ಮವರನೀನೆಂಬುದೇಸಮತೆ.

(೨) ಅವನಾಗಿ ಒಬ್ಬನು ಅವಿಚಾರದಿಂದ ಶಿರಸ್ಸಿನಮೇಲೆ + ಕೈದು ವನಿಕ್ಕುಗೆಯ. ಮೇಣು ಗಂಧಾಕ್ಷತೆ ಪುಷ್ಪದಲ್ಲಿ ಪೂಜೆಮಾಡುಗೆಯ. ಪೂಜೆ ಮಾಡಿದಡೆ ಮನವಿಸ್ಕವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ. ಎನ್ನನೆಂದುಬಂದು ಪೊರ್ದಿಪುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನ.

(೩) ತಾಮೂಡಿದ ಹೆಣ್ಣು ತನ್ನ ತಲೆಯನೇರಿತ್ತು. ತಾಮಾಡಿದ ಹೆಣ್ಣು ತೊಡೆಯನೇರಿತ್ತು. ತಾಮೂಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು ತಾಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು. ಅದು ಕಾರಣ ಹೆಣ್ಣುಹೆಣ್ಣಲ್ಲ. ಹೆಣ್ಣು ರಾಕ್ಷಸಿಯಲ್ಲ. ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ.

(೪) ನುಡಿಯಬಹುದು ಅದ್ವೈತವನೊಂದು ಕೋಟಿವೇಳೆ, ಒಮ್ಮೆ

ನಡೆಯಬಹುದೆ ನಿರ್ಧಾರವಾಗಿ ಸದ್ಭಕ್ತಿ ಆಚಾರವಾಗಿ ? ನುಡಿದಂತೆ ನಡೆವ, ನಡೆದಂತೆ ನುಡಿವ, ಸದಾಚಾರಯುಕ್ತ. ಮಹಾತ್ಮರ ಪಾದವಹಿಡಿದು ಬದುಕಿಸಯ್ಯ ಪ್ರಭುವೇ ಕಪಿಲಸಿದ್ಧ ಮಲ್ಲಿಕಾರ್ಜುನ.

(೫) ಜೀವವುಳ್ಳನ್ನಕ್ಕರ ಕ್ರೋಧದ ಮೂಲ. ಕಾಯವುಳ್ಳನ್ನಕ್ಕರ ಕಾಮದ ಮೂಲ. ಸಂಸಾರವ್ಯಾಪ್ತಿಯಮೋಹವುಳ್ಳನ್ನಕ್ಕರ ಆಶೆಯಮೂಲ. ಇಂತಪ್ಪ ಆಶೆಯ ಕೆಡಿಸಿ ಮೋಕ್ಷದಲೇಸ ತೋರಿಬದುಕಿಸಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

(೬) ವೇದಪ್ರಿಯನಲ್ಲಯ್ಯ ನೀನು ಮುಕ್ತಿಪ್ರಿಯನಲ್ಲಯ್ಯ ನೀನು + ಕ್ರಿಪ್ರಿಯನಲ್ಲಯ್ಯ ನೀನು. ನೀನು ಇವೆಲ್ಲಕ್ಕೆ ಅಸಾಧ್ಯಕಂಡಯ್ಯ. ನೀನು ಭಕ್ತಿಪ್ರಿಯನೆಂದು ಮರೆಹೊಕ್ಕೆ ಕಾಯಯ್ಯ. ನೀನು ಕಪಿಲಸಿದ್ಧ ಮಲ್ಲಿ ಕಾರ್ಜುನ.

(೭) ಒಬ್ಬರ ಮನವನೋಯಿಸಿ. ಒಬ್ಬರ ಮನೆಯ ಘಾತವಮಾಡಿ ಗಂಗೆಯ ಮುಳುಗಿದರೆ ಆಗುವದೇನಯ್ಯ ? ಚಂದ್ರನು ಗಂಗೆಯ ತಡಿಯಲ್ಲಿದ್ದರೇನು ಕಲಂಕ ಬಿಡದಾಯಿತಯ್ಯ ? ಅದುಕಾರಣ, ಮನವನೋಯಿಸದವನೇ, ಘಾತವ ಮಾಡದವನೇ, ಪರಮಪಾವನನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ.

(೮) ಮನವೆಂಬ ಮಂಟಪದ ನೆಳಲಲ್ಲಿ ನೆನಹೆಂಬ ಜ್ಞಾನಜ್ಯೋತಿಯ ಬೆಳಗಿ, ಆ ಘನಪುರುಷಪವಡಿಸಿ ಇದ್ದಾನೆ, ಎಲೆ ಅವ್ವಾ ! ಅದನೊಂದೆರಡೆನ್ನದೆ, ಮೂರುಬಾಗಿಲಮುಚ್ಚಿ ನಾಲ್ಕು ಮುಟ್ಟದೆ, ಐದ ತಟ್ಟದೆ ಇರುಕಂಡ್ಯಾ ಎಲೆ ಅವ್ವಾ ! ಐದೇಳೆಂಟೆಂಬ ಏಹಂಗ ಸಂಕುಳದ + ಉಲುಹು ಪ್ರಬಲವಾದಡೆ ಕಪಿಲಸಿದ್ಧಮಲ್ಲಿಕಾರ್ಜುನ ನಿದ್ರೆಗೆಟ್ಟಲ್ಲಿಹನು.

## (೪) ಶ್ರೀ ಉಡುತಡಿಯ ಅಕ್ಕಮಹಾದೇವಿಯವರು.

(೧) ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳ ಕೊಂದು ನಲಿನಲಿದಾಡುವ. ತನ್ನ ಮನೆಯಲೊಂದು ಶಿಶು ಸತ್ತರೆ ಅದಕ್ಕೆ ಮರಗುವಂತೆ ಅವಕೇಕೆಮರುಗನು? ಅಂತೆಂದೊಡೆ, "ಸ್ವಾತ್ಮನಾಮಿವೇತರಶ್ಚೈವದೃಷ್ಟ್ವಾನಿತ್ಯಾದಿಭಿನ್ನತೆ | ಸರ್ವಂಚಜ್ಯೋತಿದೇವೇತಿಯಃ ಪಶ್ಯತಿಸಪಶ್ಯತಿ ||" ಎಂದುದಾಗಿ ಜಾಲಗಾರನ ದುಃಖಜಗಕ್ಕೆಲ್ಲ ನಗೆಗೆಡೆ, ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು, ಜೀವಹಿಂಸೆಯಮಾಡುವ ಮಾದಿಗರನೇನೆಂಬೆನಯ್ಯ.

(೨) ಬೆಟ್ಟದಮೇಲೊಂದುಮನೆಯಮಾಡಿ ಮೃಗಂಗಳಿಗಂಜಿದಡೆಂತಯ್ಯ? ಸಮುದ್ರದತಡೆಯಲ್ಲಿ ಮನೆಯಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ? ಸಂತೆಯೊಳಗೊಂದುಮನೆಯಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ? ಚೆನ್ನಮಲ್ಲಿಕಾರ್ಜುನ ಕೇಳಯ್ಯ, ಲೋಕದೊಳಗೆಹುಟ್ಟಿರ್ದಬಳಿಕ ಸ್ತುತಿನಿಂದೆಗಳು ಬಂದಡೆಮನದಲ್ಲಿ ಕೋಪವತಾಳದೆ ಸಮಾಧಾನಿಯಾಗಿರಬೇಕು.

(೩) ಚಂದನವಕಡಿದು ಕೊರಡುತೇದಡೆ, ನೊಂದೆನೆಂದು ಕಂಪಬಿಟ್ಟಿತ್ತೇ? ತಂದು ಸುವರ್ಣವ ಕಡಿದೊರೆದಡೆ, ಬೆಂದುಕಳಂಕಹಿಡಿದಿತ್ತೆ? ಸಂದುಸಂದುಕಡಿದ ಕಬ್ಬುವತಂದು, ಗಾಣದಲ್ಲಿಕ್ಕಿ ಬೆಂದುಪಾಕಾಗುಳ್ಳ ಸಕ್ಕರೆಯಾಗಿನೊಂದೆನೆಂದು ಸವಿಯಬಿಟ್ಟಿತ್ತೇ? ನಾಹಿಂದೆಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ಹಾನಿಯೇ? ಎನ್ನ ತಂದೆಚೆನ್ನಮಲ್ಲಿಕಾರ್ಜುನ ದೇವಯ್ಯ, ಕೊಂದಡೆ, ಶರಣೆಂಬುದಮಾಣೆ,

(೪) ತೆರಣಿಯಹುಳು ತನ್ನಸ್ನೇಹದಿಂದ ಮನೆಯಮಾಡಿ, ತನ್ನನೂಲು ತನ್ನನ್ನೇಸುತ್ತಿಸಾವತೆರನಂತೆ ಮನಬಂದುದಬಯಸಿ ಬೇವುತ್ತಿರುವೆನಯ್ಯ. ಎನ್ನಮನದದುರಾಶೆಯಬಿಡಿಸಿ ನಿಮ್ಮತ್ತ ತೋರಾಚೆನ್ನಮಲ್ಲಿಕಾರ್ಜುನ.

(೫) ಕಾಯಕರ್ರನೆ ಕಂದಿದರೇನಮ್ಮಾ? ಕಾಯಮಿರ್ರನೆಮಿಂಚಿದ

ರೇನಯ್ಯ ? ಅಂತರಂಗಶುದ್ಧವಾದಬಳಿಕ, ಚೆನ್ನಮಲ್ಲಿಕಾರ್ಜುನಲಿಂಗವು ಒಲಿದಕಾಯವು ಹೇಗಿದ್ದರೇನಯ್ಯ ?

(೬) ಲೋಕದಚೇಷ್ಟೆಗೆ ರವಿಬೀಜವಾದಂತೆ, ಕರಣಂಗಳಚೇಷ್ಟೆಗೆ ಮನವೇಬೀಜ. ಎನಗುಳ್ಳದೊಂದು ಮನ, ಆ ಮನ ನಿಮ್ಮಲ್ಲಿ ಸಿಲ್ಕಿದ ಬಳಿಕ ಎನಗೆ ಭವವುಂಟೇ ಚೆನ್ನಮಲ್ಲಿಕಾರ್ಜುನ ?

(೫) ಶ್ರೀ ಮಡಿವಾಳಮಾಚಿದೇವರು.

(೧) ತನಗನ್ಯವಾದುದು ನೋಡಿದಡೆಭವಿಸಂಗ. ಸತ್ಯರು ಒಪ್ಪಿದುದನು ಒಪ್ಪದಿದ್ದೊಡೆ ಭವಿಸಂಗ. ಮಾಡಿಕೊಂಡವ್ರತವಮೀರಿದಡೆಭವಿಸಂಗ. ತಾಮಾಡಿದಭಕ್ತಿಯನಾಡಿಕೊಂಡಲ್ಲಿ ಭವಿಸಂಗ. ಇಂತಪನರಿಡಡೆ ಸದ್ಭಕ್ತಿಕಲಿದೇವರದೇವ.

(೨) ಬಹುಜಲಮಂಬಿಟ್ಟು+ಜಲುಮೆಯುಂ ತೆಗೆದರೆ, ಎದುನೆಲ ಶುದ್ಧಶೌಚರ್ಯವಲ್ಲದೆ ಅದು ಶೀಲವಲ್ಲ. ಉಪ್ಪುಬಿಟ್ಟು ಸಪ್ಪೆಯನುಂಡರೆ ಅದು ಮನದ ಹೇಸಿಕೆಯಲ್ಲದೆ ದೃಢವ್ರತವಲ್ಲ. ವ್ರತನಿಶ್ಚಯವಾದರೆ, ಪರಸ್ತ್ರೀ, ಪರಧನ, ಪರದೂಷಣೆಯನರಿತುಬಿಟ್ಟರೆ ಅರುವತ್ತಾರುವ್ರತಕಡಿ ಎಂದೆ, ಕಲಿದೇವರದೇವ.

(೩) ಗುರುಸ್ಥಳದಲ್ಲಿ ಲಿಂಗವಧರಿಸಿಕೊಂಡು ಒಟ್ಟಿರ್ದಮಣ್ಣಿಗೆ, ನಟ್ಟಿರ್ದಕಲ್ಲಿಗೆ, ಹೊಟ್ಟೆ ಅಡಿಯಾಗಿ ಅಡ್ಡಬೀಳುವ ಲೊಟ್ಟೆ ಗುಡ್ಡಗಳನೇನೆಂಬೆ ಕಲಿದೇವರದೇವಯ್ಯ.

(೪) ಅರಿವನರಿದೆನೆಂದು ಕ್ರಿಯೆಯುಬಿಡಬಾರದು. ಮಧುರಕ್ಕೆ ಮಧುರ ಒದಗಲಾಗಿ ಸವಿಗೆ ಕೊರತೆಯುಂಟೇ ? ದ್ರವ್ಯಕ್ಕೆ ದ್ರವ್ಯಕೂಡಲಾಗಿ ಬಡತನವುಂಟೇ ? ನೀಮಾಡುವ+ಮಾಟ ಶಿವಪೂಜೆಯ ನೋಟ ಭಾವವಿರಬೇಕು. ಅದು ಕಲಿದೇವರದೇವಯ್ಯನಕೂಟ ಚಂದಯ್ಯ.

(೫) ಅಯ್ಯಾ, ಕಂಡವತಿಂದು, ಹೆಂಡವಕುಡಿದು, ರಂಡಿಯಸಂಪರ್ಕವಮಾಡಿ, ಕಪ್ಪಿಗೆ ದಂಡವಕೊಡುವ, ಜಗಭಂಡ ತಾಯಿಗಂಡ ಹೆಂಡಗಾರರಿಗೆ ಸದ್ಭಕ್ತರು, ಸಿದ್ಧವೀರಮಾಹೇಶ್ವರರು, ಎಂದುಮನದಲ್ಲಿ ಭಾವಿಸಿದಡೆ ಹುಳುಗೊಂಡದಲ್ಲಿಕ್ಕುವಕಾಣಾ ನಿಮ್ಮ ಶರಣ ಕಲಿದೇವರದೇವ.

(೬) ತನುನಷ್ಟ, ಮನನಷ್ಟ, ನೆನಹುನಷ್ಟ, ಭಾವನಷ್ಟ, ಜ್ಞಾನ ನಷ್ಟ, ಇಂತೀಪಂಚನಷ್ಟದೊಳಗೆ ನಷ್ಟವಾದೆನು, ಆ ನಷ್ಟದೊಳಗೆ ನೀ ನುನಷ್ಟವಾದೆ. ಕಲಿದೇವರದೇವನೆಂಬನುಡಿ ನಿಶ್ಶಬ್ದಬ್ರಹ್ಮಮುಚ್ಯತೆ.

(೬) ಶ್ರೀ ಅಂಬಿಗರ ಚೌಡಯ್ಯನವರು.

(೧) ಆಶೆಯುಳ್ಳಾತ ಒಬ್ಬರಾಧೀನದಲ್ಲಿಪ್ಪನು. ಆಶೆಯಮನದ ಕೊನೆಯನರಿದಾತ ಕೈಲಾಸದಾಚೆಯಲ್ಲಿಪ್ಪನೆಂದಾತ ನಮ್ಮ ಅಂಬಿಗರ ಚೌಡಯ್ಯ.

(೨) ಮಾಡುಭಕ್ತಂಗೆ ಮನವೇಸಾಕ್ಷಿ. ಹೊರಹೊಮ್ಮಿ ಬಯಲ ಹೊರಲೇಕೆ ? ಹುಮ್ಮಿಲ್ಲದೆ ಮಾಡಿ ಮನದಲ್ಲಿ ಮರುಗದಿರ್ದಡೆ ಅಲ್ಲಿತಾ ಹೆರೆಹಿಂಗದಿರ್ಪನಂಬಿಗ ಚೌಡಯ್ಯ.

(೩) ಮಾತು ಗಂಟುತನದಿಂದ ಎಷ್ಟು ಮಾತನಾಡಿದಡೇನು ? ಕಾ ಮಿನಿಯರ ಕಾಲದೆಸೆಯಲ್ಲಿ ಸಿಕ್ಕಿ, ಕ್ರೋಧದ ದಳ್ಳುರಿಯಲ್ಲಿ ಬೆಂದು, ಆಸೆ ಎಂಬ ಪಾಶಕೊರಳಲ್ಲಿ ಸುತ್ತಿ, ಅದೇಕೋ, ಅದೇತರ ಮಾತೆಂದನಂಬಿಗರ ಚೌಡಯ್ಯ.

(೪) ಆರಕಶ್ಯಾರು ಬಿತ್ತಿದ ಗಿಡದ ಹೂವನೇ ಕೊಯ್ದು, ಊರಲ್ಲಿ ಕಟ್ಟಿದ ನೀರನೇ ತಂದು, ನಾಡೆಲ್ಲ ನೋಡಲೆಂದು ಪೂಜಿಸುವ ಪುಣ್ಯವು ಆ ಹೂವಿಗೋ, ಆ ನೀರಿಗೋ, ನಾಡೆಲ್ಲ ನೋಡಲೆಂದು ಪೂಜಿಸಿದಾತಗೋ? ಇದನಾನರಿಯೆ, ನೀವೇ ಬಲ್ಲಡೆ ಹೇಳೆಂದಾತ ನಮ್ಮ ಅಂಬಿಗರ ಚೌಡಯ್ಯ.

(೫) ಎಲ್ಲವ ಕಳೆದುಳಿದ ಹೂವತಂದು, ಗೆಲ್ಲಸೋಲಕ್ಕೊಳಗಾ ಗದ ನೀರತುಂಬಿ, ಕರಣಂಗಳೆಲ್ಲವು ಕಂಗಳ ತುಂಬಿನಿಂದು ನೋಡಿ, ಎಂದೂ ತನ್ನಂಗದಿಚ್ಛೆಯನರಿದು ಮರೆದು ಲಿಂಗವ ಪೂಜಿಸಬೇಕೆಂದನಂಬಿ ಗರ ಚೌಡಯ್ಯ.

(೬) ಬಡತನಕ್ಕೆ ಉಂಬುವ ಚಿಂತೆ, ಉಂಡರೆ ಉಡುವ ಚಿಂತೆ, ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡರ ಚಿಂತೆ, ಹೆಂಡರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ, ಬದುಕಾದರೆ ಕೇಡಿನ

ಚಿಂತೆ, ಕಡದಿರೆ ಮರಣದ ಚಿಂತೆ, ಇಂತೀ ಹಲವು ಚಿಂತೆಯಲ್ಲಿ ಇಪ್ಪವರನ್ನು ಕಂಡೆನು. ಶಿವಚಿಂತೆ ಇದ್ದವರೊಬ್ಬರನೂ ಕಾಣೆನೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

(೭) ಶ್ರೀ ಮಾದಾರ ಚೆನ್ನಯ್ಯನವರು

(೧) ವೇದಶಾಸ್ತ್ರಕ್ಕೆ ಹಾರುವನಾಗಿ, ವೀರವಿತರಣಕ್ಕೆ ಕ್ಷತ್ರಿಯನಾಗಿ, ಸರ್ವವ್ಯವಹಾರಂಗಳ ನೋಡುವಲ್ಲಿ ವೈಶ್ಯನಾಗಿ, ಕೃಷಿಯ ಮಾಡುವದಕ್ಕೆ ಶೂದ್ರನಾಗಿ, ಇಂತೀ ಜಾತಿಗೋತ್ರದೊಳಗೆ ನೀಚಶ್ರೇಷ್ಠವೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ. ಬ್ರಹ್ಮವನರಿದಲ್ಲಿ ಬ್ರಾಹ್ಮಣ. ಸರ್ವಜೀವ ಹತ ಕರ್ಮಕ್ಕೊಳಗಾದಲ್ಲಿ ಸಮ್ಮಗಾರ. ಈ ಉಭಯವನರಿದು ಮರೆಯಲಿಲ್ಲ ಕೈಯ್ಯುಳಿಗತ್ತಿ ಅಡಿಗೂಂಟ ಕೆಡೆಯಾಗಬೇಡ ಅರಿ ನಿಜಾತ್ಮರಾಮರಾಮನ.

(೨) ಶುಕ್ರಶೋಣಿತ ಮಜ್ಜೆಮಾಂಸ ಹಸಿವು ತೃಷೆ, ವ್ಯಸನ, ವಿಷಯಾದಿಗಳೊಂದೇ ಭೇದ. ಮಾಡುವಕೃಷಿ ವ್ಯವಸಾಯಹಲವಲ್ಲದೆ. ತೋರುವ ತೋರಿಕೆ, ಅರಿವಾತ್ಮನೊಂದೇಭೇದ. ಆವ ಕುಲವಾದಡೂ ಅರಿದಲ್ಲಿಯೇ ಪರತತ್ವಭಾವಿ, ಮರೆದಲ್ಲಿಯೇ ಮಲಮಾಯಾಸಂಬಂಧಿ. ಇಂತೀ ಉಭಯವನರಿದು ಮರೆಯಲಿಲ್ಲ. ಕೈಯ್ಯುಳಿಗತ್ತಿ ಅಡಿಗೂಂಟ ಕೆಡೆಯಾಗಬೇಡ ಅರಿನಿಜಾತ್ಮರಾಮರಾಮನ.

(೩) ನಡೆನುಡಿಸಿದ್ಧಾಂತವಾದಲ್ಲಿ ಕುಲಹೊಲೆಯಿಲ್ಲ. ನುಡಿಲೇಸು ನಡೆಯಧಮವಾದಲ್ಲಿ ಅದೇ ಬಿಡುಗಡೆ. ಇಲ್ಲದ ಹೊಲೆ, ಕಳವು, ಪರದಾರಂಗಳಲ್ಲಿ ಹೊಲಬನರಿಯದೆ ಕೆಟ್ಟು ನಡೆವುತ್ತ ಮತ್ತೆ ಕುಲಜರೆಂಬ ಒಡಲುಂಟೇ ? ಆಚಾರವೇ ಕುಲ. ಅನಾಚಾರವೇ ಹೊಲೆ. ಇಂತೀ ಉಭಯವತಿಳಿದು ಅರಿಯಬೇಕು. ಕೈಯ್ಯುಳಿಗತ್ತಿ ಅಡಿಗೂಂಟ ಕೆಡೆಯಾಗಬೇಡ. ಅರಿ ನಿಜಾತ್ಮರಾಮರಾಮನ,

(೮) ಶ್ರೀ ಹಡಪದ ಅಪ್ಪಣ್ಣನವರು.

(೧) ಚಾಂಡಾಲನಾದರೆಯೂ ಶಿವಭಕ್ತನೇ ಕುಲಜನು. ಆತನೊ

ಡನೆ ನುಡಿಗಡಣವ ಮಾಡಬೇಕೆಂದುದು ವೇದ. ಕುಲವ ನೋಡಲುಬೇಡ ಛಲವ ನೋಡಲುಬೇಡ. ಆತನೆಲ್ಲರಿಗಿಂತಲೂ ಹಿರಿಯನು. ಆತನಿರುತ್ತಿರ್ದ ಡಲ್ಲಿ ಶಿವ ನಿರುತ್ತಿಹ ನೆಂದು ವೇದನುಡಿವುತ್ತಿದೆ. ಶ್ಲೋ॥ ಅಪಿವಾಯ ಶ್ವಾಂಡಾಲೋ ಶಿವ ಇತಿವಾಙ್ಯಂದತ್ತೇನರಹಸಾ । ವಸೇತ್ತೇನ ಸಹವಿ ಶೇತ್ತೇನ ಸಹ ಭುಂಜೀಯಾತ್ ॥ ಹೀಗೆಂದು ಉಪನಿಷತ್ತು ನುಡಿವುತ್ತಿದೆ. ಶಿವನೇ, ನಿಮ್ಮ ಸದ್ಭಕ್ತರನು ಅವರಿವರೆಂದು ಕುಲವೆತ್ತಿನುಡಿದವಂಗೆ ಇಪ್ಪತ್ತೆಂಟುಕೋಟಿ ನರಕ ತಪ್ಪದು, ನೋಡಯ್ಯ ಬಸವಪ್ರಿಯ ಕೂಡಲ ಚೆನ್ನಸಂಗಮದೇವ.

(೯) ಶ್ರೀ ಮೇದಾರಕೇತಯ್ಯನವರು.

ಇಂದ್ರಿಯಂಗಳಕೊಂದಿಹೆನೆಂದಡೆ, ಅವು ಕಂದರ್ಪನಹಂಗು. ಕಂದರ್ಪನಕೊಂದಿಹೆನೆಂದಡೆ, ಅವುಕಂಗಳಲಾಭ. ಕಂಗಳು ಮುಚ್ಚಿಯಲ್ಲದೆ ಲಿಂಗವಕಾಣಬಾರದು. ಅದು ನಿರಂಗಂಗಲ್ಲದೆ ಜಗದ ಹಂಗಿನವರಿಗಿಲ್ಲ ಎಂದೆ ಗೌರೇಶ್ವರ.

(೧೦) ಶ್ರೀ ಸಕಳೇಶಮಾದರಸರು.

ಜ್ಯೋತಿಮುಟ್ಟಿದ ಬತ್ತಿ ಎಲ್ಲಾ ಜ್ಯೋತಿಯಪ್ಪವಯ್ಯ. ಸಾಗರವ ಮುಟ್ಟಿದನದಿಗಳೆಲ್ಲ ಸಾಗರವಪ್ಪವಯ್ಯ. ಪ್ರಸಾದಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯ. ಲಿಂಗವ ಮುಟ್ಟಿದ ಅಂಗವೆಲ್ಲಲಿಂಗವಪ್ಪವಯ್ಯ. ಸಕಳೇಶ್ವರದೇವ, ನಿಮ್ಮಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯ.

(೧೧) ಶ್ರೀ ಶಿವಲೆಂಕಮಂಚಣ್ಣನವರು.

ಕಾಯವಿದ್ದುಕಾಂಬುವದುಗುರುಸ್ಥಲ. ಜೀವವಿದ್ದುಕಾಂಬುವದು ಲಿಂಗಸ್ಥಲ. ಭಾವವಿದ್ದುಕಾಂಬುವದು ಜಂಗಮಸ್ಥಲ, ತ್ರಿವಿಧವನೊಡಗೂಡಿಕಾಂಬುವದು ಭಕ್ತಿಸ್ಥಲ. ಭಕ್ತಿನಿಶ್ಚಯವಾಗಿನಿಂದಲ್ಲಿ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ ನಿಶ್ಚಯವಾದಸ್ಥಲ.

(೧೨) ಶ್ರೀ ಮೋಳಿಗೆ ಮಾರಯ್ಯನವರು.

ಆತ್ಮತೇಜವಬಿಟ್ಟಾಗಲೇ ಗುರುವನರಿದ, ಮನವಿಕಾರವಬಿಟ್ಟಾ

ಗಲೇ ಲಿಂಗವನರಿದ. ಧನವಿಕಾರವಬಿಟ್ಟಾಗಲೇ ಜಂಗಮವನರಿದ. ಇಂತು ತ್ರಿವಿಧನಾಸ್ತಿಯಾದಂಗಲ್ಲದೆನಿಃಕಳಂಕಮಲ್ಲಿಕಾರ್ಜುನನಲ್ಲಿ ಸಹಜಭಕ್ತನಲ್ಲ.

(೧೩) ಶ್ರೀ ದಸರಯ್ಯನವರು.

ಸರ್ವವನರಿದಲ್ಲಿ, ಸರ್ವಜ್ಞನಾದಲ್ಲಿ, ಇದಿರಿಲ್ಲತನ್ನಲ್ಲಿ, ತಾನಿಲ್ಲ ಇದಿರಲ್ಲಿ, ತನ್ನ ಭಿನ್ನಭಾವ ಅನ್ಯರಲ್ಲಿತೋರಿ, ಆ ಗುಣತನ್ನನೆ ಅನ್ಯವೆನಿಸುವದು. ತನ್ನಯಶಾಂತಿ ಅನ್ಯರಲ್ಲಿ ತೋರಿ ಅಲ್ಲಿ ಭಿನ್ನಭಾವವಿಲ್ಲದಿರೆ ಅವರನ್ಯರಲ್ಲ ಎಮ್ಮವರೆಂಬರು ಅದು ತನ್ನಗುಣ, ಅನ್ಯವಿಲ್ಲ ಎಂಬುದನರಿದು + ತನ್ನೊಪ್ಪದರ್ಪಣದಲ್ಲಿ ತೋರುವಂತೆ · ಇದಕ್ಕೆ ಕರ್ತೃಶವಿಲ್ಲ. ದಸರೇಶ್ವರಲಿಂಗವನರಿವುದಕ್ಕೆ.

(೧೪) ಶ್ರೀ ಗಾವುದಿಮಾಚಯ್ಯನವರು.

ಭಕ್ತರು ದ್ರವ್ಯವಗಳಿಸಿದಲ್ಲಿ ತಮ್ಮ ತನುವಿದ್ದಲ್ಲಿಯೇ ಗುರುಲಿಂಗ ಜಂಗಮಕ್ಕರ್ಪಿಸುವುದು. ಇದೇ ಸದ್ಭಕ್ತಿಯ + ಹೊಲಬು, ತಾನಳಿದ ಮತ್ತೆ ಮನೆಮಕ್ಕಳಿಗೆಂದಡೆ ಆಚಾರಕ್ಕೆ ಭಂಗ, ಆತನೇ ಸ್ವಾಮಿಗೆ ಸ್ವಾಮಿದ್ರೋಹಿ. ಇದನರಿದು ಕಲ್ಯಾಣದತ್ರಿಪುರಾಂತಕಲಿಂಗದಲ್ಲಿ ಗಾವುದಿ ಮಾಚಯ್ಯ ಹೇಳಿದುದಕೇಳಿ ಎಲ್ಲರೂ ಸತ್ಯವೆನ್ನಿರಣ್ಣಾ.

(೧೫) ಶ್ರೀ ಸೊಡ್ಡಳ ಬಾಚರಸರು

ಗಂಡಸುಳ್ಳ ಹೆಂಡಿರ ಕಂಡು ಅಳುಪದಿರಾ ಮನವೇ ಬಂದ ಬಸಿರನು ಉಂಡ ಮೊಲೆಯನುಕಂಡು ಮರುಗದಿರಾ ಮನವೇ, ಉದ್ದಂಡತನದಲ್ಲಿ ನಡೆವ ಭಂಡರನು ಹುಳುಗೊಂಡದಲ್ಲಿಕ್ಕದೆ ಬಿಡುವನೇ ನಮ್ಮ ದೇವರಾಯ ಸೊಡ್ಡಳಾ.

(೧೬) ಶ್ರೀ ಡೋಹರಕಕ್ಕಯ್ಯನವರು.

ನೆನೆಯಲರಿಯೆ, ನಿರ್ಧರಿಸಲರಿಯೆ, ಮನವಿಲ್ಲಾಗಿ, ಭಾವಿಸಲರಿಯೆ, ಬೆರಿಸಲರಿಯೆ, ಭಾವನಿರ್ಭಾವವಾಯಿತ್ತಾಗಿ. ಧ್ಯಾನ ಮೌನವನರಿಯೆ, ಧ್ಯಾನರೂಪಾತೀತ ತಾನೆಯಾಯಿತ್ತಾಗಿ. ಜ್ಞಾತೃಜ್ಞಾನಜ್ಞೇಯವೆಲ್ಲವನು ಮೀರಿ ಅಭಿನವ ಮಲ್ಲಿಕಾರ್ಜುನಯ್ಯನಲ್ಲಿ ಪರಮಸುಖಿಯಾದೆನು.

## (೧೭) ಶ್ರೀ ಎಲೇಶಕೇತಯ್ಯನವರು.

ಬಸವಣ್ಣಂಗೆ ಸರ್ವಗುಣಶೀಲ. ಚನ್ನಬಸವಣ್ಣಂಗೆ ದಿವ್ಯಜ್ಞಾನ ಗುಣಶೀಲ. ಪ್ರಭುದೇವರಿಗೆ ಬಸವಣ್ಣ ಚೆನ್ನಬಸವಣ್ಣನ ಉಭಯಗುಣ ಶೀಲ. ಮಡಿವಾಳಯ್ಯಗೆ ವೀರಗುಣಶೀಲ. ಅಜಗಣ್ಣಂಗೆ ಐಕ್ಯಗುಣ ಶೀಲ. ಚಂದಯ್ಯಂಗೆ ವೈರಾಗ್ಯಗುಣಶೀಲ. ನಿಜಗುಣಂಗೆ ಆತ್ಮಗುಣ ಶೀಲ. ಸಿದ್ಧರಾಮಯ್ಯಂಗೆ ಯೋಗಗುಣಶೀಲ. ಮೋಳಿಗಯ್ಯಂಗೆ ಭೇದ ಗುಣಶೀಲ. ಘಟ್ಟಿವಾಳಂಗೆ ತ್ರಿವಿಧಗುಣಶೀಲ. * ಅಕ್ಕಗಳಿಗೆ ನಿರ್ವಾಣ ಗುಣಶೀಲ. ಮಿಕ್ಕಾದ ಪ್ರಮಥರಿಗೆಲ್ಲಕ್ಕ ತಮ್ಮ ತಮ್ಮ ಸ್ವತಂತ್ರಗುಣ ಶೀಲ, ಎನಗೆ ಎಲೇಶ್ವರ ಲಿಂಗವ, ಕೊಟ್ಟಿನೆಂದೇ ವಿಶ್ವಾಸಗುಣಶೀಲ.

## ಶ್ರೀ ಕಾಟಕೂಟಯ್ಯನವರ ಪತ್ನಿ ರೇಚವ್ವೆಯರು.

(೧೮) ಬಂಜೆ ಆವಿಂಗೆ ಕ್ಷೀರಉಂಟೇ ? ವ್ರತಹೀನನ ಬೆರೆಯಲಾಗದು. ಬೆರೆದರೆ ನರಕತಪ್ಪದು. ನಾನೊಲ್ಲೆ ಒಲ್ಲೆನಾಗಿ ಕುಂಭೇಶ್ವರ.

## (೧೯) ಶ್ರೀ ಕೊಟ್ಟಣದ ಸೋಮವ್ವೆಯವರು.

ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಲ್ಲ, ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿ ಇಲ್ಲ. ಅರಿಯದಾದರು ಹೋಗಲಿ. ಅರಿದು ಬೆರೆದೆನಾದರೆ ಕನ್ನಗತ್ತಿಯಲ್ಲಿ ಕಿವಿಯ ಕೊಯ್ವಿರಯ್ಯ. ಒಲ್ಲೆ ಒಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರ.

## (೨೦) ಶ್ರೀದಸರಯ್ಯನವರ ಪತ್ನಿ ವೀರಮ್ಮನವರು.

ಚರಣಾಯುಧವೇಳೆಯನರಿವುದಯ್ಯ. ಭಕ್ತವ್ರತಹೀನನರಿದು ನೆರೆಯನಯ್ಯ. ನೆರೆದರೆ ನರಕ ಗುರುಶಾಂತೇಶ್ವರ.

## (೨೧) ಶ್ರೀ ನೂಲಿಯ ಚಂದಯ್ಯನವರು.

ಸತ್ಯಶುದ್ಧ ಕಾಯಕದಲ್ಲಿ, ಚಿತ್ತ ಸ್ವಚ್ಛಂದವಾಗದಿರಬೇಕು. ನೇಮದ ಕೂಲಿಯಂ ದಿನನಿತ್ಯಕಾಯಕದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಪುಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ

---

* ಉಡುತಡಿಯ ಅಕ್ಕಮಹಾದೇವಿಯವರು.

ನಷ್ಟವಯ್ಯ ಈ ನಿನ್ನ ಸೇವೆ ನನಗೆ ನನ್ನ ಪ್ರಸಾದಕ್ಕೆ ಚಂದೇಶ್ವರ ಲಿಂಗಕ್ಕೆ ಪ್ರಾಣವಯ್ಯ.

### (೨೨) ಶ್ರೀ ಗಟ್ಟಿವಾಳಯ್ಯನವರು.

ಸತ್ತ ಶವ ಕಿಚ್ಚುಬಲ್ಲುದೇ ? ನಿಷ್ಠೆ ನಿಬ್ಬೆರಗಾಗಿ ಕರ್ಮಸ್ವರೂಪ ಮರ್ತ್ಯರ ಹಂಗುಬಲ್ಲುದೇ ? ತೊಟ್ಟು ಬಿಟ್ಟಹಣ್ಣು ಮತ್ತೆ ಹತ್ತುವದೇ ? ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲ, ನಿಲ್ಲು, ಮಾಣು.

### (೨೩) ಶ್ರೀ ಮೆರೆಮಿಂಡದೇವರು.

ಕರ್ಮವಿರಹಿತ ಗುರುವಾಗಬೇಕು. ಕಾಲವಿರಹಿತ ಲಿಂಗವಾಗಬೇಕು. ಭೋಗವಿರಹಿತ ಜಂಗಮವಾಗಬೇಕು. ಹಾಗಲ್ಲದೆ ಐಘಟದೂರ ರಾಮೇಶ್ವರಲಿಂಗವ ಕೂಡಬಾರದು.

### (೨೪) ಶ್ರೀ ಕಿನ್ನರಿ ಬ್ರಹ್ಮಯ್ಯನವರು.

ನಿನ್ನ ಹರೆಯದ+ರೂಹಿನ, ಚೆಲುವಿನ ನುಡಿಯ, ಜಾಣಿನ ಸಿರಿಯ ಸಂತೋಷದ, ಕರಿತುರಗರಥ ಪದಾತಿಯನೆರವಿಯ, ಸತಿಸುತರ ಬಂಧುಗಳ ಸಮೂಹದ, ನಿನ್ನ ಕುಲದಭಿಮಾನದ ಗರ್ವವ ಬಿಡು. ಮರುಳಾಗದಿರು. ಅಕಟಕಟಾ ! ರೋಮಜನಿಂದ ಹಿರಿಯನೇ ? ಮಾರನನಿಂ ಚಲುವನೇ ? ಸುರಪತಿಯಿಂ ಸಂಪನ್ನನೇ ? ವಾಮದೇವ ವಶಿಷ್ಠರಿಂದ ಕುಲಜನೇ ? ಅಂತಕನ ದೂತರು ಬಂದು ಕೈಪಿಡಿದೆಳೆದುಯ್ಯುವಾಗ, ನುಡಿತಡವಿಲ್ಲ, ಕೇಳೋ ನರನೇ ? ಎನ್ನ ಮಹಾಲಿಂಗ ತ್ರಿಪುರಾಂತಕದೇವರ ಪೂಜಿಸಿದೆಯಾದರೆ ಕೇಡಿಲ್ಲದೇ ಪದವು ದೊರೆಕೊಂಬುವದು ಮರುಳೇ.

### (೨೫) ಶ್ರೀ ಕದರಿಕಾಯಕದರೆಮ್ಮವ್ವೆಯವರು.

ನಾ ತಿರುಹುವ ರಾಟೆಯ ಕುಲಜಾತಿಯಕೇಳಿರಣ್ಣಾ, ಅಡಿಯಣ ಹಲಿಗೆ ಬ್ರಹ್ಮ, ತೋರಣವಿಷ್ಣು, ನಿಂದ ಬೊಂಬೆ ಮಹಾರುದ್ರ, ರುದ್ರನ ಬೆಂಬಳಿಯವೆರಡು ಸೂತ್ರದ ಕರ್ಣ, ಅರಿವೆಂಬ ಕದುರು, ಭಕ್ತಿ ಎಂಬ ಕಯ್ಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು, ಕದಿರು ತುಂಬಿತ್ತು. ರಾಟೆಯ ತಿರುಹಲಾರೆ. ಎನ್ನ ಗಂಡಹಃಟ್ಟಿಹ. ಇನ್ನೇವೆ ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ ?

